CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಮೇ ೨೦, ೨೦೦೪ (ವೈಶಾಖ ೩೦, ಶಕ ವರ್ಷ ೧೯೨೬) | ಸಂಚಿಕೆ ೨೦ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರವರ ಕಛೇರಿ, 10ನೇ ಅಪರ ವೃತ್ತ, ಬೆಂಗಳೂರು**

**ವಿಷಯ:** ಕಳೆದು ಹೋಗಿರುವ ಶಾಸನ ಬದ್ಧ ನಮೂನೆಗಳ ಬಗ್ಗೆ.

ಸಾರ್ವಜನಿಕರ ಗಮನಕ್ಕೆ ಈ ಮೂಲಕ ತರ ಬಯಸುವುದೇನೆಂದರೆ, ಮೆ: ಕುಮಾರ್ ಗ್ರಾನೈಟ್ ಅಂಡ್ ಮಾರ್ಗಲ್ಸ್, ನಂ.25, 9ನೇ ಕ್ರಾಸ್ ಕೆ.ಪಿ. ವೆಸ್ಟ್, ಬೆಂಗಳೂರು ಇವರು ಈ ಕಛೇರಿಯಿಂದ ಪಡೆದಿದ್ದ ಕ್ರಮ ಸಂಖ್ಯೆ 8354035 ರಿಂದ 8354059 ವರೆಗಿನ ತ್ರಿಪ್ರತಿಯಲ್ಲಿ ಒಟ್ಟು 25 ನಮೂನೆ-39 ಗಳನ್ನು ಕಳೆದುಕೊಂಡಿರುವುದಾಗಿ ಲಿಖಿತ ಮೂಲಕ ಈ ಕಛೇರಿಗೆ ತಿಳಿಸಿರುತ್ತಾರೆ.

ಕಳೆದು ಹೋಗಿರುವ ಮೇಲ್ಕಂಡ ನಮೂನೆ-39 ಗಳು ಅಸಿಂಧು ಎಂದು ಈ ಕೆಳಗೆ ಸಹಿ ಮಾಡಿರುವವರು ನಿರ್ಧರಿಸಿದ್ದು, ಸದರಿ ಶಾಸನ ಬದ್ಧ ನಮೂನೆಗಳು ಒಂದು ಪಕ್ಷ ಯಾರಿಗಾದರು ಸಿಕ್ಕಿದ್ದಲ್ಲಿ ಅವುಗಳನ್ನು ಈ ಕಛೇರಿಗೆ ಹಿಂತಿರುಗಿಸಬೇಕಾಗಿ ಕೋರಲಾಗಿದೆ. ಕಳೆದು ಹೋದ ಶಾಸನ ಬದ್ಧ ನಮೂನೆಗಳ ವಿವರ ಈ ಕೆಳಕಂಡಂತಿದೆ.

| | | |
|---|---|---|
| 1) | ಕರ ನಿರ್ಧಾರಣಾ ಅಧಿಕಾರಿ | ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, 10ನೇ ಅಪರ ವೃತ್ತ, ಶೇಷಾದ್ರಿಪುರಂ, ಬೆಂಗಳೂರು. |
| 2) | ಶಾಸನ ಬದ್ಧ ನಮೂನೆ ಹೆಸರು | ನಮೂನೆ-39 |
| 3) | ಕಳೆದು ಹೋಗಿರುವ ನಮೂನೆ-39ರ ಕ್ರಮ ಸಂಖ್ಯೆ | 8354035 ರಿಂದ 8354059 |
| 4) | ನಮೂನೆ ಪಡೆದಿದ್ದ ವರ್ತಕರ ಹೆಸರು ಮತ್ತು ವಿಳಾಸ ಮತ್ತು ನೋಂದಣಿ ಸಂಖ್ಯೆ | ಮೆ: ಕುಮಾರ್ ಗ್ರಾನೈಟ್ ಅಂಡ್ ಮಾರ್ಬಲ್ಸ್, ನಂ.25, 9ನೇ ಕ್ರಾಸ್ ಕೆ.ಪಿ. ವೆಸ್ಟ್, ಬೆಂಗಳೂರು, ನೋ.ಸಂ. 72817003:72867000 |
| 5) | ನಮೂನೆಗಳು ಕಳೆದ ಬಗ್ಗೆ ಕರ ನಿರ್ಧಾರಣಾ ಅಧಿಕಾರಿಗಳಿಗೆ ವರದಿ ಮಾಡಿದ ದಿನಾಂಕ: | 27.2.2004 |
| 6) | ಕಳೆದು ಹೋದ : ಕಳುವಾದ ಬಗ್ಗೆ ವಿವರ. | ಕೊರಿರ್ ಲಾರಿ ಅಪಘಾತದಿಂದ ಬೆಂಕಿ ಹತ್ತಿಕೊಂಡು ಸುಟ್ಟು ಹೋಗಿರುತ್ತದೆ. |

ಪಿ.ಆರ್. 682 ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, 10ನೇ ಅಪರ ವೃತ್ತ, ಬೆಂಗಳೂರು.

**ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಇವರ ಕಾರ್ಯವಾಹಿಗಳು**

**ವಿಷಯ:** ಸಮಾಪನೆಯಲ್ಲಿರುವ ಕುಣಿಗಲ್ ತಾಲ್ಲೂಕು, ಹಳೇವೂರು ಮೀನುಗಾರರ ಸಹಕಾರ ಸಂಘ ನಿ., ಹಳೇವೂರು ಇದನ್ನು ಪುನಃಶ್ಚೇತನಗೊಳಿಸುವ ಬಗ್ಗೆ.

**ಉಲ್ಲೇಖ:** 1) ಈ ಕಛೇರಿಯ ಸಮಾಪನಾ ಆದೇಶ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/86/ಸಿಆರ್-24/2000-2001, ದಿನಾಂಕ: 27.7.2000.

2) ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ಪತ್ರ ಸಂಖ್ಯೆ: ಸನಿ32/ಡಿಎಲ್‌ಎಸ್/259/2003-04, ದಿನಾಂಕ: 31.3.2004.

**ಪ್ರಸ್ತಾವನೆ:**

ತುಮಕೂರು ಜಿಲ್ಲೆ ಕುಣಿಗಲ್ ತಾಲ್ಲೂಕು ಹಳೇವೂರು ಮೀನುಗಾರರ ಸಹಕಾರ ಸಂಘ ನಿ., ಹಳೇವೂರು ಈ ಸಂಘವು ಕಾರ್ಯ ನಿರ್ವಹಿಸದೇ ಸ್ಥಗಿತಗೊಂಡಿದ್ದರಿಂದ ಉಲ್ಲೇಖ (1)ರ ರೀತ್ಯಾ ಈ ಕಛೇರಿಯ ಆದೇಶದ ಮೇರೆಗೆ ಸಂಘವನ್ನು ಸಮಾಪನೆಗೊಳಿಸಲಾಗಿತ್ತು. ಉಲ್ಲೇಖ (2) ರಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪ ವಿಭಾಗ, ತುಮಕೂರು ಇವರು ತಿಳಿಸಿರುವಂತೆ, ಸಂಘದ ಸಮಾಪನಾಧಿಕಾರಿಗಳು ಸಂಘದ ನೋಂದಣಿ ರದ್ದತಿಗೆ ಕ್ರಮವಿಟ್ಟು ಮೀನುಗಾರಿಕೆ ಇಲಾಖೆಯಿಂದ ನೀಡಿದ್ದ ಸರ್ಕಾರದ ಷೇರು ಮತ್ತು ಸಾಲವನ್ನು ಮನ್ನಾ ಮಾಡಲು ಈಗಾಗಲೇ ಪ್ರಸ್ತಾವೆಯನ್ನು ಸಲ್ಲಿಸಲಾಗಿದ್ದು ನಂತರ ಸದರಿ ಸಂಘದ ಕಾರ್ಯವ್ಯಾಪ್ತಿಯ ಸದಸ್ಯರು ಮತ್ತು ಗ್ರಾಮಸ್ಥರು ಸಹಕಾರ ಅಭಿವೃದ್ಧಿ ಅಧಿಕಾರಿ, ಕುಣಿಗಲ್ ಇವರಿಗೆ ಸದರಿ ಸಂಘವನ್ನು ಪುನಃಶ್ಚೇತನಗೊಳಿಸಲು ಕೋರಿರುತ್ತಾರೆ. ಈ ಬಗ್ಗೆ ದಿನಾಂಕ: 15.10.2001ರ ಪತ್ರದಲ್ಲಿ ಸಹಕಾರ ಅಭಿವೃದ್ಧಿ ಅಧಿಕಾರಿ, ಕುಣಿಗಲ್ ಇವರು ಸಂಘವನ್ನು ಪುನಃಶ್ಚೇತನಗೊಳಿಸಬಹುದೆಂದು ಅಭಿಪ್ರಾಯ ವ್ಯಕ್ತಪಡಿಸಿರುತ್ತಾರೆ. ನಂತರ ಈ ಬಗ್ಗೆ ಮೀನುಗಾರಿಕೆ ಸಹಾಯಕ ನಿರ್ದೇಶಕರು (ಶ್ರೇಣಿ-2) ಕುಣಿಗಲ್, ಇವರ ಅಭಿಪ್ರಾಯ ಕೋರಿ ಪತ್ರ ಬರೆದಿದ್ದು ಪತ್ರದಲ್ಲಿ ಸದರಿಯವರು ಮೀನುಗಾರಿಕೆ ಇಲಾಖೆಯಿಂದ ಸಾಲ ನೀಡಿರುವುದರಿಂದ ಸಾಲದ ಮರುಪಾವತಿಗೆ ಅನುಕೂಲವಾಗುವಂತೆ ಸಂಘವನ್ನು ಪುನಶ್ಚೇತನಗೊಳಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆಂದು, ಈ ಹಿನ್ನೆಲೆಯಲ್ಲಿ ಸದರಿ ಸಂಘವನ್ನು ಪುನಃಶ್ಚೇತನಗೊಳಿಸುವುದು ಸೂಕ್ತವೆಂದು ತಿಳಿಸಿ ವರದಿ ಸಲ್ಲಿಸಿರುತ್ತಾರೆ.

ಈ ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸದರಿ ಸಂಘವನ್ನು ಪುನಶ್ಚೇತನಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಈ ಕೆಳಕಂಡಂತೆ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಆರ್‌ಟಿ/ಎಲ್‌ಕ್ಯೂಡಿ/86/ಸಿಆರ್-24/2000-01, ದಿನಾಂಕ: 7ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ನು ಗಮನಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 72(3) ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಎಂಡಬ್ಲ್ಯೂ/69/ಸಿಎಲ್‌ಎಂ/2001, ದಿನಾಂಕ: 21.11.2001ರ ಮೇರೆಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಮೊಹಮದ್ ಸಲೀಂ, ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು ಆದ ನಾನು ಕುಣಿಗಲ್ ತಾಲ್ಲೂಕು ಹಳೇವೂರು ಮೀನುಗಾರರ ಸಹಕಾರ ಸಂಘ ನಿ., ಹಳೇವೂರು ಈ ಸಂಘವನ್ನು ಸಂಘದ ಸದಸ್ಯರ ಮತ್ತು ಗ್ರಾಮಸ್ಥರ ಹಿತದೃಷ್ಟಿಯಿಂದ ಈ ಸಂಘವು ತನ್ನ ಕಾರ್ಯ ಚಟುವಟಿಕೆಗಳನ್ನು ಪುನರಾರಂಭಿಸಿ ಉತ್ತಮವಾಗಿ ಕಾರ್ಯ ನಿರ್ವಹಿಸುವಂತೆ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ತಿಳಿಸಿ ಉಲ್ಲೇಖ (1)ರ ಸಮಾಪನಾ ಆದೇಶವನ್ನು ರದ್ದುಪಡಿಸಿ ಸಂಘವನ್ನು ಪುನಶ್ಚೇತನಗೊಳಿಸಿ ಆದೇಶಿಸಿರುತ್ತೇನೆ.

ಈ ಆದೇಶವನ್ನು ದಿನಾಂಕ: 7.4.2004 ರಂದು ನನ್ನ ಹಸ್ತಾಕ್ಷರ ಮತ್ತು ಕಛೇರಿಯ ಮುದ್ರೆಯೊಂದಿಗೆ ನೀಡಿರುತ್ತೇನೆ.

**ಮೊಹಮದ್ ಸಲೀಂ**

ಪಿ.ಆರ್. 685 ಸಹಕಾರ ಸಂಘಗಳ ಉಪನಿಬಂಧಕರು, ತುಮಕೂರು ಜಿಲ್ಲೆ, ತುಮಕೂರು.

**UNIVERSITY OF AGRICULTURAL SCIENCES, BANGALORE**

**ಪ್ರಕಟಣೆ ಸಂಖ್ಯೆ: ಅಅ:ವಿ-4:ಬೆಂಮಸಾ.ಸಂಸ್ಥೆ:2004-2005, ದಿನಾಂಕ: 21ನೇ ಏಪ್ರಿಲ್ 2004**

ಬೆಂಗಳೂರು ಕೃಷಿ ವಿಶ್ವವಿದ್ಯಾನಿಲಯವು ಮುಖ್ಯ ಸಂಶೋಧನಾ ಕೇಂದ್ರ, ಹೆಬ್ಬಾಳದ ಸ.ನಂ.82:1, 84:4, 85:7, 87:2, 88, 89 ಮತ್ತು 90 ರಲ್ಲಿ ಬರುವ ಒಟ್ಟು 7.34 ಎಕರೆ ಜಮೀನನ್ನು ಪ್ರತೀ ಎಕರೆಗೆ 15.00 ಲಕ್ಷ ರೂ.ನಂತೆ 110.10 ಲಕ್ಷ ರೂ.ಗಳನ್ನು ಪಡೆದು ಜಮೀನನ್ನು ಬೆಂಗಳೂರು ಮಹಾ ನಗರ ಸಾರಿಗೆ ಸಂಸ್ಥೆಗೆ ಹಸ್ತಾಂತರಿಸಲಾಗಿರುತ್ತದೆ.

Estate Officer,

P.D.29 University of Agricultural Sciences, GKVK, Bangalore-560 065.

**OFFICE OF THE EXECUTIVE ENGINEER, KBJNL IBC DIVISION, YANKANCHI, SINDGI TQ. BIJAPUR DISTRICT**

**NOTIFICATION No. KBJNL/IDC/DN/YNK/WUCS/PB/03-04/2041, dated: 7th February 2004**

**(See Section-2(A) of the Act)**

**See Notification No.ID-I6-NPC-2000 (P), dated: March-2001.**

In excercise of the Powers conferred by (1) clause (3) Section (2) of the Karnataka Irrigation Act-1965 and (2) Notification No:ID:16:NPC:2001, dated: 8.3.2001 and irrigation officer hereby notifies the areas of operation as specified in clause (3) and (A) of the table below for the Water Users Society, as (W.U.S.).

| Sl. No. | Name of the Distributory sub-distributory, Minor lateral, direct pipe culvert. | Area to be irrigated in the area of operated | |
|---|---|---|---|
| | | Name of the village | Extent of irrigated Area |
| 1. | Desanagi-2 WUCS IBC Dy-11, R-4 2.60 km. | DESANAGI-2. | 345.31 Ha. |
| 2. | Kumashi-4 WUCS Head qtr. Devanagaov. IBC Dy-13 L-10, 11 OL-7. | KUMASHI-4. | 430.74 Ha. |

**SHRI NOOR AHAMED**

P.D.30 Executive Engineer, KBJNL IBC Division, Yankanchi.
Sindgi Taluk, Bijapur District.

**OFFICE OF THE EXECUTIVE ENGINEER, KBJNL IBC DIVISION, YANKANCHI, SINDGI TQ. BIJAPUR DISTRICT**

**NOTIFICATION No. KBJNL/IBC/DN/YNK/WUCS/PB/03-04/1947, dated: 24th January 2004**

**(See Section-2(A) of the Act)**

**See Notification No.ID-I6-NPC-2000 (P), dated: March-2001.**

In excercise of the Powers conferred by (1) clause (3) Section (2) of the Karnataka Irrigation Act-1965 and (2) Notification No:ID:16:NPC:2001, dated: 8.3.2001 and irrigation officer hereby notifies the areas of operation as specified in clause (3) and (A) of the table below for the Water Users Society, as (W.U.S.).

| Sl. No. | Name of the Distributory sub-distributory, Minor lateral, direct pipe culvert. | Area to be irrigated in the area of operated | |
|---|---|---|---|
| | | Name of the village | Extent of irrigated Area |
| 1. | Akhandahalli-1 W.U.C.S. IBC Dy-2B L-5,6. | Akhandahalli-1 | 495.86 Ha. |
| 2. | Ranjangi-1 W.U.C.S. IBC Dy-10, R-1, 2. | Ranjangi-1 | 542.03 Ha. |

**SHRI NOOR AHAMED**

P.D.31 Executive Engineer, KBJNL IBC Division, Yankanchi. Sindgi Taluk, Bijapur District.

**OFFICE OF THE EXECUTIVE ENGINEER, KBJNL IBC DIVISION, YANKANCHI, SINDGI TQ. BIJAPUR DISTRICT**

**NOTIFICATION No. KBJNL/IBC/DN/YNK/WUCS/PB/03-04/1919, dated: 21st February 2004**

**(See Section-2(A) of the Act)**

**See Notification No.ID-I6-NPC-2000 (P), dated: March-2001.**

In excercise of the Powers conferred by (1) clause (3) Section (2) of the Karnataka Irrigation Act-1965 and (2) Notification No:ID:16:NPC:2001, dated: 8.3.2001 and irrigation officer hereby notifies the areas of operation as specified in clause (3) and (A) of the table below for the Water Users Society, as (W.U.S.).

| Sl. No. | Name of the Distributory sub-distributory, Minor lateral, direct pipe culvert. | Area to be irrigated in the area of operated | |
|---|---|---|---|
| | | Name of the village | Extent of irrigated Area |
| 1. | Kakkalameli-9 W.U.C.S. IBC D-13 L-4 | Kakkalameli-9 | 445.40 Ha. |
| 2. | Yatanoor-3 W.U.C.S. IBC D-11 L-22 SL-1, SR-1, SL-2. | Yatanoor-3 | 623.11 Ha. |
| 3. | Devaranavadgi-1 W.U.C.S. IBC D-13 L-4 Sub-L-1 & 2. | Devaranavadgi-1 | 425.77 Ha. |

**SHRI NOOR AHAMED**

P.D.32 Executive Engineer, KBJNL IBC Division, Yankanchi. Sindgi Taluk, Bijapur District.

**ದಿವಾಣಿ ನ್ಯಾಯಾಧೀಶರು (ಕಿ.ಶ್ರೇ.) ಮತ್ತು ಪ್ರಥಮ ದರ್ಜೆಯ ನ್ಯಾಯಿಕ ದಂಡಾಧಿಕಾರಿಗಳ ನ್ಯಾಯಾಲಯ ಹೂವಿನ ಹಡಗಲಿ**

**ಸಾರ್ವಜನಿಕ ಪ್ರಕಟಣೆ**

ಈ ಮೂಲಕ ತಮಗೆ ತಿಳಿಯ ಪಡಿಸುವುದೇನೆಂದರೆ ಈ ಕೆಳಗೆ ಕಾಣಿಸಿದ ಪ್ರಕರಣದಲ್ಲಿನ ಮುದ್ದೇಮಾಲನ್ನು ಯಾವುದೇ ವಾರಸುದಾರರು ಅಥವಾ ಹಕ್ಕುದಾರರು ಇದುವರೆಗೂ ತಮಗೆ ಬೇಕೆಂದು ಕೇಳಿರುವುದಿಲ್ಲ. ಕಾರಣ ಈ ಪ್ರಕಟಣೆ ಹೊರಡಿಸಿದ ದಿನಾಂಕದಿಂದ ಆರು (6) ತಿಂಗಳ ಒಳಗೆ ಕೆಳಗೆ ಕಾಣಿಸಿದ ಮಾಲಿನ ಬಗ್ಗೆ ತಮ್ಮ ವಾರಸುದಾರಿಕೆ ಅಥವಾ ಹಕ್ಕುದಾರಿಕೆ ಇದ್ದಲ್ಲಿ ಸದರೀ ಮಾಲನ್ನು ತಮ್ಮದೆಂದು ಗುರುತಿಸಿ ಪಡೆದುಕೊಳ್ಳುವ ಸಲುವಾಗಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಬಹುದು. ಇದಕ್ಕೆ ತಪ್ಪಿದಲ್ಲಿ ಸದರಿ ಕೆಳಕಾಣಿಸಿದ ಕೇಸಿನ ಮುದ್ದೇಮಾಲನ್ನು ವಾರಸುದಾರರು ಯಾರು ಇಲ್ಲವೆಂದು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

**ಅನುಸೂಚಿ**

| ಅ:ನಂ: | ಪ್ರಕರಣದ ಸಂಖ್ಯೆ ಮತ್ತು ಪಿ.ಆರ್. ಸಂಖ್ಯೆ | ಸ್ವತ್ತಿನ ವಿವರ |
|---|---|---|
| 1. | ಸಿ. ಸಿ. ಸಂಖ್ಯೆ: 432 - 2002, ಪಿ.ಆರ್. ಸಂಖ್ಯೆ: 8 - 2003 | ಎಂ.ಇ.ಎಸ್. 3675 ಯಜಡಿ ದ್ವಿಚಕ್ರ ವಾಹನ ಅಂದಾಜು ಬೆಲೆ 5,000-00 |

ಸ್ಥಳ: ಹೂವಿನ ಹಡಗಲಿ

ದಿನಾಂಕ: 17.4.2004

ಪಿ.ಆರ್. 618

ದಿವಾಣಿ ನ್ಯಾಯಾಧೀಶರು (ಕಿ.ಶ್ರೇ.) ಮತ್ತು ಪ್ರಥಮ ದರ್ಜೆಯ ನ್ಯಾಯಿಕ ದಂಡಾಧಿಕಾರಿಗಳು, ಹೂವಿನ ಹಡಗಲಿ.-

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀಮತಿ ಲೆನ್ನಿಜಾನ್, ಶುಶ್ರೂಷಕಿ, ಜಯಚಾಮರಾಜೇಂದ್ರ ಆಸ್ಪತ್ರೆ, ಹಾಸನ.

**ಓದಲಾಗಿದೆ:**

1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್(3) ಸಿಆರ್-49: 01-02, ದಿನಾಂಕ: 8.2.2002.
2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್(3)ಸಿಆರ್-49:01-02, ದಿ: 24.1.2003.
3) ವಿಚಾರಣಾ ವರದಿಯ ಸಂ: ವಿಅ:ವಿಚಾರಣೆ:ಎನ್‌ಜಿ:ಮುಜಾಅ:ಜಾಕೋ:ಎನ್‌ಜಿ-237:02-03 ದಿ: 10.11.2003.
4) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(3) ಸಿಆರ್-49:01-02 ದಿನಾಂಕ: 4.12.2003.

**ಪ್ರಸ್ತಾವನೆ:**

ಶ್ರೀಮತಿ ಲೆಸ್ಲಿಜಾನ್, ಶುಶ್ರೂಷಕಿ, ಇವರು ಈ ಹಿಂದೆ ಜಯಚಾಮರಾಜೇಂದ್ರ ಆಸ್ಪತ್ರೆ, ಹಾಸನ, ಇಲ್ಲಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 3.9.2000 ದಿಂದ ಅನಧಿಕೃತ ಗೈರುಹಾಜರಿಯಾಗಿದ್ದು, ಇವರ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಿ, ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿಗಳು, ಜಾಗೃತಕೋಶ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4) ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (5) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರದಿಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಲಕೋಟೆಯು ಹಿಂದಕ್ಕೆ ಬಂದಿರುತ್ತದೆ.

ಆದ್ದರಿಂದ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(3)ಸಿಆರ್-49:2001-02, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ ಲೆಸ್ಲಿಜಾನ್, ಶುಶ್ರೂಷಕಿ, ಇವರ ಅನಧಿಕೃತ ಗೈರುಹಾಜರಿಯು ಸಾಬೀತಾಗಿರುವುದರಿಂದ, ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿದ್ದೇನೆ.

**ಡಾ: ಜಿ.ಬಿ. ದೇಸಾಯಿ**

ಪಿ.ಆರ್. 686 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀಮತಿ ಓಂಕಾರಮ್ಮ ಎನ್., ಕಿಮಆ ಸಹಾಯಕಿ.

**ಓದಲಾಗಿದೆ:**
1) ನಿರ್ದೇಶನಾಲಯದ ದೋಷಾರೋಪಣೆ ಹಾಗೂ ತಿಳುವಳಿಕೆಯ ಪತ್ರದ ಸಂಖ್ಯೆ: ಡಿಪಿಎನ್(9) ಸಿಆರ್-62: 99-2000, ದಿನಾಂಕ: 27.1.2001.
2) ನೌಕರರ ಲಿಖಿತ ಅಹವಾಲು ಪತ್ರ ದಿನಾಂಕ: 3.3.2001.
3) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ: ಡಿಪಿಎನ್(1)ಸಿಆರ್-62:99-00, ದಿ: 6.2.2002.
4) ವಿಚಾರಣಾ ವರದಿಯ ಸಂಖ್ಯೆ: ವಿಅ:ವಿಚಾರಣೆ:ಎಸ್‌ಬಿ:ಮುಜಾಅ:ಜಾಕೋ:ಎಲ್‌ಜಿ-119:02-03, ದಿನಾಂಕ: 31.10.2003.
5) ವಿಚಾರಣಾ ವರದಿ ನೌಕರರಿಗೆ ಜಾರಿ ಮಾಡಿದ ಸೂಚನಾ ಪತ್ರದ ಸಂಖ್ಯೆ: ಡಿಪಿಎನ್(1) ಸಿಆರ್-62:99-00 ದಿನಾಂಕ: 19.11.2003.
6) ನೌಕರರ ಲಿಖಿತ ಅಹವಾಲು, ಪತ್ರ ದಿನಾಂಕ: 31.12.2003.

**ಪ್ರಸ್ತಾವನೆ:**

ಶ್ರೀಮತಿ ಎನ್. ಓಂಕಾರಮ್ಮ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ಇವರು ಈ ಹಿಂದೆ ಪ್ರಾಥಮಿಕ ಆರೋಗ್ಯ ಕೇಂದ್ರ, ಯಗಟಿ, ಕಡೂರು ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 30.5.80 ರಿಂದ 13.8.80 ರವರೆಗೆ ಅನಧಿಕೃತ ಗೈರು ಹಾಜರಿ ಆಗಿದ್ದು, ಇವರ ಬಗ್ಗೆ ಮೇಲೆ ಓದಲಾದ (1) ರಲ್ಲಿನ ಪತ್ರದಲ್ಲಿ ತಿಳುವಳಿಕೆ ಹಾಗೂ ದೋಷಾರೋಪಣಾ ಪಟ್ಟಿಯನ್ನು ಜಾರಿಗೊಳಿಸಿದ್ದು, ಇದಕ್ಕೆ ಅನುಗುಣವಾಗಿ ನೌಕರರು ಮೇಲೆ ಓದಲಾದ (2) ರಲ್ಲಿನ ಪತ್ರದಲ್ಲಿ ತನ್ನ ಲಿಖಿತ ಅಹವಾಲನ್ನು ಸಲ್ಲಿಸಿದಂತೆ ಪರಿಶೀಲಿಸಿ ಅದು ಸಮರ್ಪಕವಾಗಿರದ ಕಾರಣ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವುದು ಸೂಕ್ತವೆಂದು ನಿರ್ಣಯಿಸಿ ಮೇಲೆ ಓದಲಾದ (3) ರಲ್ಲಿನ ಆದೇಶದಲ್ಲಿ ಮುಖ್ಯ ಜಾಗೃತಾಧಿಕಾರಿ (ಜಾಕೋ) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದ್ದಂತೆ ರೀತ್ಯಾ ಮೇಲೆ ಓದಲಾದ (4) ರಲ್ಲಿನ ಆದೇಶದಂತೆ ವಿಚಾರಣೆ ನಡೆಸಿ ವರದಿಯನ್ನು ಸಲ್ಲಿಸಿದ್ದಂತೆ ಮೇಲೆ ಓದಲಾದ (5) ರಲ್ಲಿನ ಸೂಚನಾ ಪತ್ರದಲ್ಲಿ ವಿಚಾರಣೆ ವರಲಯ ಪ್ರತಿಯನ್ನು ಜಾರಿಗೊಳಿಸಿದ್ದಕ್ಕನುಗುಣವಾಗಿ ಮೇಲೆ ಓದಲಾದ (6) ರಲ್ಲಿ ನೌಕರರು ತನ್ನ ಲಿಖಿತ ಅಹವಾಲನ್ನು ಸಲ್ಲಿಸಿರುತ್ತಾರೆ.

ನೌಕರರು ಸಲ್ಲಿಸಿರುವ ಲಿಖಿತ ಅಹವಾಲು ಹಾಗೂ ವಿಚಾರಣಾಧಿಕಾರಿಗಳು ನೀಡಿರುವ ವಿಚಾರಣಾ ವರದಿಯಲ್ಲಿ ನಿರ್ಣಯದ ವರದಿಯನ್ನು ಪರಿಶೀಲಿಸಿದ ತರುವಾಯ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(1)ಸಿಆರ್-62:1999-00, ಬೆಂಗಳೂರು, ದಿನಾಂಕ: 24ನೇ ಏಪ್ರಿಲ್ 2004**

1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶಕರು, ಆದ ನಾನು ಶ್ರೀಮತಿ ಎನ್. ಓಂಕಾರಮ್ಮ ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ರವರು ಸರ್ಕಾರಿ ಸೇವೆಗೆ ಅನಧಿಕೃತವಾಗಿ ದಿನಾಂಕ: 30.5.80 ರಿಂದ

ದಿನಾಂಕ: 13.8.85 ರವರೆಗೆ ಗೈರು ಹಾಜರಾಗಿರುವುದು ವಿಚಾರಣೆಯಿಂದ ಸಾಬೀತಾಗಿರುವುದು, ದಂಡನೆಯಾಗಿ ಸದರಿ ನಿಯಮ 8(8)ರ ಪ್ರಕಾರ ಸೇವೆಯಿಂದ ವಜಾ ಮಾಡುವ ದಂಡನೆ ವಿಧಿಸಿದ್ದೇನೆ.

**ಡಾ: ಜಿ.ಬಿ. ದೇಸಾಯಿ**

ಪಿ.ಆರ್. 687 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯದ ನಡವಳಿಗಳು, ಬೆಂಗಳೂರು**

**ವಿಷಯ:** ಶ್ರೀ ಎ. ಮುರಳಿ, ಶುಶ್ರೂಷಕ, ಜಿಲ್ಲಾ ಆಸ್ಪತ್ರೆ, ತುಮಕೂರು ಇವರು ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಿ ಬಗ್ಗೆ - ಅಂತಿಮ ಆದೇಶ.

**ಉಲ್ಲೇಖ:** ಜಿಲ್ಲಾ ಶಸ್ತ್ರ ಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ, ತುಮಕೂರು ಇವರ ಪತ್ರ ಸಂಖ್ಯೆ: ಜಿಆತು:ಸಿಬ್ಬಂದಿ(1):120:98-99, ದಿನಾಂಕ: 22.12.2003.

**ಪ್ರಸ್ತಾವನೆ:**

ಶ್ರೀ ಎ. ಮುರಳಿ, ಶುಶ್ರೂಷಕ, ಜಿಲ್ಲಾ ಆಸ್ಪತ್ರೆ, ತುಮಕೂರು, ಇವರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ಇಲಾಖೆಯಲ್ಲಿ ಶುಶ್ರೂಷಕ ಹುದ್ದೆಗೆ ನೇಮಕ ಹೊಂದಿದ್ದು ದಿನಾಂಕ: 23.1.99 ರಿಂದ ಜಿಲ್ಲಾ ಆಸ್ಪತ್ರೆ, ತುಮಕೂರು ಇಲ್ಲಿ ಸೇವೆ ಸಲ್ಲಿಸುತ್ತಿದ್ದು, ದಿನಾಂಕ: 8.3.2003 ರಿಂದ ಇಲ್ಲಿಯವರೆಗೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ನೌಕರರು ಖಾಯಂಪೂರ್ವ ಸೇವಾವಧಿ ಘೋಷಣೆಯಾಗುವ ಮೊದಲೇ ಸರ್ಕಾರಿ ಸೇವೆಗೆ ಗೈರುಹಾಜರಾಗಿರುತ್ತಾರೆ. ಆದುದರಿಂದ ಮುಂದಿನ ಕ್ರಮ ಕೈಗೊಳ್ಳುವಂತೆ ಜಿಲ್ಲಾ ಶಸ್ತ್ರಚಿಕಿತ್ಸಕರು, ಜಿಲ್ಲಾ ಆಸ್ಪತ್ರೆ, ತುಮಕೂರು ಇವರು ನೌಕರರ ಸೇವಾಪುಸ್ತಕದೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ನೌಕರರ ಖಾಯಂಪೂರ್ವಸೇವಾವಧಿ ಘೋಷಣೆಯಾಗದೇ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಪ್ರೊಬೇಷನ್) ನಿಯಮಗಳು 1972ರ ನಿಯಮಗಳ ಅಡಿಯಲ್ಲಿ ಇವರನ್ನು ಸೇವೆಯಿಂದ ತೆಗೆದುಹಾಕುವಂತಹ ದಂಡನೆಗೆ ಗುರಿಯಾಗಿರುತ್ತಾರೆ. ನೌಕರರು ಗೈರುಹಾಜರಾಗುವ ಮೂಲಕ ಸಾರ್ವಜನಿಕರಿಗೆ ತೊಂದರೆ ಉಂಟುಮಾಡುವುದರಿಂದ ಹಾಗೂ ಸರ್ಕಾರಿ ಸೇವಾ ನಿಯಮಗಳನ್ನು ಉಲ್ಲಂಘಿಸಿರುವುದರಿಂದ ಇವರು ಸರ್ಕಾರಿ ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಸರ್ಕಾರಿ ಸೇವೆಯಿಂದ ತೆಗೆದುಹಾಕಲು ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(4)ಸಿಆರ್-48:2003-04, ದಿನಾಂಕ: 28ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಡಾ: ಜಿ.ಬಿ. ದೇಸಾಯಿ, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀ ಎ. ಮುರಳಿ, ಶುಶ್ರೂಷಕರು ಜಿಲ್ಲಾ ಆಸ್ಪತ್ರೆ, ತುಮಕೂರು ಇವರು ಖಾಯಂಪೂರ್ವಸೇವಾವಧಿಯನ್ನು ತೃಪ್ತಿಕರವಾಗಿ ಪೂರೈಸುವ ಮುನ್ನ ಸರ್ಕಾರಿ ಸೇವೆಗೆ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ಇವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮ (ಪ್ರೊಬೇಷನ್) ನಿಯಮಗಳು 1977ರ ನಿಯಮ 6(1) ಮತ್ತು 6(2)ರ ಪ್ರಕಾರ ಇವರು ಸೇವೆಯಲ್ಲಿ ಮುಂದುವರೆಯಲು ಅನರ್ಹರೆಂದು ಪರಿಗಣಿಸಿ ಇವರನ್ನು ಇವರು ಸರ್ಕಾರಿ ಸೇವೆಗೆ ಗೈರುಹಾಜರಾಗಿರುವ ದಿನಾಂಕದಿಂದ ಜಾರಿಗೆ ಬರುವಂತೆ ಸೇವೆಯಿಂದ (ಡಿಸ್‌ಚಾರ್ಜ್) ತೆಗೆದುಹಾಕಿದ್ದೇನೆ.

**ಡಾ: ಜಿ.ಬಿ. ದೇಸಾಯಿ**

ಪಿ.ಆರ್. 688 ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು.

**PROCEEDINGS OF THE REGISTERING AUTHORITY AND REGIONAL TRANSPORT OFFICER: INDIRANAGAR:BANGALORE (EAST):BANGALORE-38**

**Present:** Afzal Ahmed Khan,
Regional Transport Officer & Registering Authority, Indiranagar, Bangalore(East).

**Sub:** Cancellation of registration certificate in respect of M.V.No. CAK-2567 LGV-Reg.

**Ref:** Application Dated: 31.01.2004 R/O

**PREAMBLE:**

The M.V.No. CAK-2567 LGV stands registered in the name of Managing Partner m/s crystal crean safina plaza, Shop No.6, 84/85 Infantry Road, Bangalore-1. The registered owner has intimated and submitted the documents to this office voluntarily on 31.01.2004, stating that the vehicle is under major repairs and he is not interested to operate this M.V. in these conditions and he is requested to the authority for cancellation of registration certificate. The tax paid upto 31.01.2004.

In view of the above facts I pass the:

**ORDER No. RTO.BNG.RGN/TR.PR. /CAK-2567/2003-04, dated: 31st January 2004**

In exercise of the powers vested under Sec.55(1) of the Motor Vehicle Act. 1988, I Afzal Ahmed Khan, Registering Authority & Regional Transport Officer, Bangalore (East) do hereby cancel the registration & Registration Certificate of the CAK 2567 LGV w.e.f. 31.01.2004 as desired by the R/o without prejudice and subject to recover the arrears of tax or penalty due if any found later on.

The brief description of the M.V. is as follows:

| | | |
|---|---|---|
| 1 | M.V.NO. | CAK-2567 |
| 2 | Class of Vehicle | LGV |
| 3 | Type of Body | open |
| 4 | Chassis No. | 616-FD-318168 |
| 5 | Engine No. | 616-969-023182 |
| 6 | Year of Manufacture | 1988 |

**AFZAL AHMED KHAN**
Regional Transport Officer & Registering Authority,
Indiranagar, Bangalore (East).

P.R. 689

**ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ, ವಿಜಾಪೂರ ಇವರ ನ್ಯಾಯಾಲಯದ ನಡುವಳಿ**

**ಪಿರ್ಯಾಧಿದಾರರು:** ಎಂ.ಬಿ. ಹಳ್ಳದಮನಿ, ಅಬಕಾರಿ ಉಪ ನಿರೀಕ್ಷಕರು, ವಿಜಾಪೂರ, ಗ್ರಾಮೀಣ ಉಪವಲಯ.
ಗುನ್ನೆ ನಂಬರ್: 3:2003-04, ದಿನಾಂಕ: 27ನೇ ಸೆಪ್ಟೆಂಬರ್ 2003

**ಆರೋಪಿತರು:** 1) ಆರೋಪಿ ಯಾರು ಇರುವುದಿಲ್ಲಾ
2) ವಾಹನದ ಮಾಲೀಕರು ಒಂದು ಕೆಂಪು ಬಣ್ಣದ ಎಂ:80:ಬಜಾಜ್, ಇದರ ನಂ: ಕೆಎ:23:ಜೆ:8782, ಚಾಸ್ಸಿ ನಂ: 16:ಸಿಬಿಇ:02762, ಇಂಜಿನ್ ನಂಬರ್: 16:ಇಬಿಇಬಿ:21728.

**ಪ್ರಸ್ತಾವನೆ:**

ದಿನಾಂಕ: 27.09.2003 ರಂದು ಸಂಜೆ 6.15 ನಿಮಿಷಕ್ಕೆ ವಿಜಾಪೂರ ತಾಲ್ಲೂಕಿನ ತಿಕೋಟಾ ಗ್ರಾಮದ ಬಸವೇಶ್ವರ ಸರ್ಕಲ್‌ದಲ್ಲಿ ಪಿರ್ಯಾಧಿದಾರರು ವಾರಸುದಾರರು ಇಲ್ಲದ ಒಂದು ಕೆಂಪು ಬಣ್ಣದ ಎಂ:80:(ಬಜಾಜ್) ನೋಂದಣಿ ಸಂಖ್ಯೆ: ಕೆಎ:23:ಜೆ:8782, ಚಾಸಿಸ್ ನಂಬರ್: 16:ಸಿಬಿಇ:02762, ಇಂಜಿನ್ ನಂಬರ್: 16:ಇಬಿಇಬಿ:21728, ತಪಾಸಣೆಗೆ ಒಳಪಡಿಸಿದಾಗ ಮಹಾರಾಷ್ಟ್ರದಲ್ಲಿ ತಯಾರಾದ 180 ಮಿಲಿಯ ಪ್ರಮಾಣದ 15 ಬಾಟ್ಲಿಗಳು ದೇಶಿ ದಾರು ಟ್ಯಾಂಗೊ ಪಂಚ ಎಂಬ ಮಾದಕ ದ್ರವ್ಯವನ್ನು ಪತ್ತೆ ಮಾಡಿ ಪಂಚನಾಮಾ ಕ್ರಮ ಜರುಗಿಸಿ ಮಾದರಿ ಸೀಸೆಯನ್ನು ತೆಗೆದು ದೊರೆತ ಮುದ್ದೇ ಮಾಲು ಮತ್ತು ಮೇಲೆ ತೋರಿಸಿದ ವಾಹನವನ್ನು ಅಮಾನತ್‌ಪಡಿಸಿಕೊಂಡು ಗುನ್ನೆ ನಂಬರ್:3:2003-04, ದಿನಾಂಕ: 27.09.2003 ರಂತೆ ಪ್ರಥಮ ಮಾಹಿತಿಯ ವರದಿ, ಪಂಚನಾಮಾ ವರದಿ, ಸರ್ಚ್ ಮೆಮೊ, ರಸಾಯನಿಕ ತಜ್ಞರ ವರದಿ ನಂಬರ್: 5390:2003, ದಿನಾಂಕ: 5.11.2003 ಈ ಪ್ರಾಧಿಕಾರಕ್ಕೆ ದಾಖಲೆ ಮಾಡಿರುತ್ತಾರೆ.

ಪಿರ್ಯಾಧಿಕಾರರು ಕರ್ನಾಟಕ ರಾಜ್ಯದಲ್ಲಿ ತೆರಿಗೆ ಪಾವತಿ ಮಾಡದೇ ಇರುವಂತಹ 15 ಬಾಟ್ಲಿಗಳು ಅಂದರೆ 2.7 ಬಲ್ಕ ಲೀಟರ್‌ನಷ್ಟು ಬಾಟ್ಲಿಗಳಲ್ಲಿ ದೇಶಿ ದಾರು (ಮಹಾರಾಷ್ಟ್ರದಲ್ಲಿ ತಯಾರಿಸಿದ್ದು) ಹೊಂದಿದ್ದರಿಂದ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 11, 12, 14 ಮತ್ತು 38(ಎ) ಪ್ರಕಾರ ಅಪರಾಧವನ್ನು ದಾಖಲೆ ಮಾಡಿರುತ್ತಾರೆ. ಈ ತತ್ಸಂಬಂಧ ಪಿರ್ಯಾಧಿದಾರರು ರಸಾಯನಿಕ ತಜ್ಞರ ವರದಿಯನ್ನು ಪಡೆದು ಈ ಪ್ರಾಧಿಕಾರಕ್ಕೆ ನೀಡಿರುತ್ತಾರೆ. ಸದರಿ ವರದಿಯಲ್ಲಿ ಜಪ್ತು ಮಾಡಿದ ಬಾಟ್ಲಿಗಳಲ್ಲಿ ಮದ್ಯಸಾರದ ಅಂಶ 37.3 ಡಿಗ್ರಿ ಯು.ಪಿ. ಇರುವುದಾಗಿ ತಿಳಿಸಿರುತ್ತಾರೆ. ಈ ಕಾರಣಗಳಿಂದ ಯಾರೇ ಆಗಲೀ ಅನಧಿಕೃತವಾಗಿ ಮದ್ಯಸಾರದ ಅಂಶವುಳ್ಳ ಬಾಟ್ಲಿಗಳನ್ನು ಸಾಗಾಣಿಕೆ ಮಾಡುವುದು ಅಪರಾಧವಾಗಿರುವುದರಿಂದ ಜಪ್ತು ಮಾಡಿದ ವಾಹನವನ್ನು ಉಪಯೋಗಿಸಿಕೊಂಡು ಅಕ್ರಮವಾಗಿ ಕರ್ನಾಟಕ ರಾಜ್ಯದಲ್ಲಿ ತೆರಿಗೆ ಪಾವತಿ ಮಾಡದೇ ಇರುವಂತಹ ಮದ್ಯವನ್ನು ಸಾಗಾಣಿಕೆ ಮಾಡಿದ ಪ್ರಯುಕ್ತ ಜಪ್ತು ಮಾಡಿದ ವಾಹನ ಮತ್ತು ಮದ್ಯದ ಬಾಟ್ಲಿಗಳು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಪ್ರಕಾರ ಮುಟ್ಟುಗೋಲು ಹಾಕಿಕೊಳ್ಳುವುದು ಅವಶ್ಯವೆಂದು ಭಾವಿಸಲಾಗಿದೆ. ಈ ತತ್ಸಂಬಂಧ ಆರೋಪಿತರಾಗಲೀ ಅಥವಾ ಜಪ್ತು ಮಾಡಿದ ವಾಹನದ ಮಾಲೀಕರಾಗಲೀ ಗುನ್ನೆ ದಾಖಲಾದ 30 ದಿನಗಳ ನಂತರವೂ ಯಾರೇ ಆಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಜಪ್ತು ಮಾಡಿದ ಮುದ್ದೇಮಾಲಿನ ಬಗ್ಗೆ ತಮ್ಮ ಹಕ್ಕನ್ನು ಸ್ಥಾಪಿಸಿರುವುದಿಲ್ಲಾ. ಈ ಕಾರಣಗಳಿಂದ ಈ ಪ್ರಾಧಿಕಾರವು ದಿನಾಂಕ: 9.2.2004 ರಂದು ಜಪ್ತು ಮಾಡಿದ ವಾಹನದ ವಿವರ, ಮತ್ತು ಜಪ್ತು ಮಾಡಿದ ಮದ್ಯ ಮತ್ತು ಗುನ್ನೆ ದಾಖಲು ಮಾಡಿದ ವಿವರಗಳನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ನೋಟೀಸನ್ನು ಪ್ರಕಟಿಸಲು ಕ್ರಮವನ್ನು ಕೈಗೊಳ್ಳಲಾಗಿತ್ತು. ಇದರ ಅನ್ವಯ ವಾಹನವು ಯಾರಿಗೆ ಸೇರಿದೆಯೋ ಅಂಥಹವರ ತಿಳುವಳಿಕೆಗಾಗಿ ಕರ್ನಾಟಕ ರಾಜ್ಯ ಪತ್ರ ಭಾಗ-3 ರಲ್ಲಿ ಗುರುವಾರ ಮಾರ್ಚ್ 11, 2004ರ ಪೇಜ್ ನಂಬರ್: 425 ರಲ್ಲಿ ಪ್ರಕಟಣೆಯನ್ನು ನೀಡಲಾಗಿರುತ್ತದೆ. ಸದರಿ ಪ್ರಕಟಣೆ ಆದ ಒಂದು ತಿಂಗಳ ನಂತರವೂ ಯಾರೇ ಆಗಲೀ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಜಪ್ತು ಮಾಡಿದ ವಾಹನ ಮತ್ತು ಮುದ್ದೇಮಾಲಿನ ಬಗ್ಗೆ ಯಾರೇ ಮುಂದೆ ಬಂದು ಅರ್ಜಿಯನ್ನು ನೀಡಿರುವುದಿಲ್ಲಾ. ಈ ಕಾರಣಗಳಿಂದಾ ಸದರಿ ಪ್ರಕರಣದಲ್ಲಿ ಪಿರ್ಯಾಧಿದಾರರು ಜಪ್ತು ಮಾಡಿದ ವಾಹನ, ಮತ್ತು ಮದ್ಯದ ಬಾಟ್ಲಿಗಳನ್ನು (ಶ್ಯಾಂಪಲ್ ಬಾಟ್ಲಿಗಳನ್ನು) ಹೊರತುಪಡಿಸಿ ಕರ್ನಾಟಕ ರಾಜ್ಯ ಸರ್ಕಾರಕ್ಕೆ ಕರ್ನಾಟಕ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಪ್ರಕಾರ ಅಧಿಕಾರವನ್ನು ಚಲಾಯಿಸಿ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ:ಬಿಜಿಪಿ:ಡಿಟಿಸಿಆರ್:72:2003-04, ದಿನಾಂಕ: 28ನೇ ಏಪ್ರಿಲ್ 2004**

ಕೆ.ಆರ್. ಗೋವಿಂದಶೆಟ್ಟಿ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು, ವಿಜಾಪೂರ ಜಿಲ್ಲೆ ವಿಜಾಪೂರ ಆದ ನಾನು, ನನಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ದಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪಿರ್ಯಾಧಿದಾರರು ಗುನ್ನೆ ನಂಬರ್: 3:2003-04, ದಿನಾಂಕ: 27.9.2003 ರಲ್ಲಿ ಜಪ್ತು ಮಾಡಿದ ಒಂದು ಕೆಂಪು ಬಣ್ಣದ ಬಜಾಜ್: ಎಂ:80:ವಾಹನದ ನೋಂದಣಿ ನಂಬರ್: ಕೆಎ:23:ಜಿ:8782, ಚಾಸಿಸ್ ನಂಬರ್: 16:ಸಿಬಿಇ:2762, ಇಂಜಿನ್ ನಂಬರ್: 16 ಇ.ಬಿ.ಇ.ಬಿ.:21728,

ವಾಹನವನ್ನು ಮತ್ತು ಜಪ್ತು ಮಾಡಿದ ದೇಶಿ ದಾರು ಟ್ಯಾಂಗೊ ಪಂಚ (180 ಮಿಲಿಯ 15 ಬಾಟ್ಲಿಗಳು) (ಶ್ಯಾಂಪಲ್ ಬಾಟ್ಲಿ ಹೊರತುಪಡಿಸಿ) ಕರ್ನಾಟಕ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದೇನೆ.

ಈ ಆದೇಶವನ್ನು ದಿನಾಂಕ: 28.04.2004 ರಂದು ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ನನ್ನ ಸಹಿ ಮತ್ತು ಮೊಹರು ಹಾಕಿಹೊರಡಿಸಲಾಗಿದೆ.-

**ಕೆ.ಆರ್. ಗೋವಿಂದಶೆಟ್ಟಿ**

ಪಿ.ಆರ್. 691 ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ, ವಿಜಾಪೂರ.

**ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ, ವಿಜಾಪೂರ ಇವರ ನ್ಯಾಯಾಲಯದ ನಡುವಳಿ**

**ಪಿರ್ಯಾಧಿದಾರರು:** ಅಬಕಾರಿ ಉಪ ನಿರೀಕ್ಷಕರು, ವಿಜಾಪೂರ ಉಪವಿಭಾಗ
ಗುನ್ನೆ ನಂಬರ್: 22:2001-02, ದಿನಾಂಕ: 23ನೇ ಡಿಸೆಂಬರ್ 2001

**ಆರೋಪಿತರು:** 1) ಕೃಷ್ಣಾ ತಂದೆ ಬಾಬುರಾಯ ಶಿಂಧೆ, ಸಾ: ಅಡಿಹುಡಿ, ತಾ: ಜಮಖಂಡಿ, ಜಿ: ಬಾಗಲಕೋಟೆ.
2) ಮಹಿಬೂಬ ಬಿನ್ ಹುಸೇನ್‌ಸಾಬ್ ಸಾರವಾನ, ಸಾ: ಮುಧೋಳ, ಬಾಗಲಕೋಟೆ ಜಿಲ್ಲೆ.
3) ಒಂದು ಹಳೆಯ ಬಿಳಿ ಬಣ್ಣದ ಅಂಬಾಸಿಡರ್ ಕಾರ್ ನಂ: ಜಿಡಿಇ:6666, ಚಾಸಿಸ್ ನಂ: III:390079, ಇಂಜಿನ್ ನಂ:ಒಡಿಇ:51052.

**ಪ್ರಸ್ತಾವನೆ:**

ದಿನಾಂಕ: 23.12.2001 ರಂದು ಸಂಜೆ 5.00 ಗಂಟೆಯ ಸಮಯದಲ್ಲಿ ವಿಜಾಪೂರ ತಾಲ್ಲೂಕಿನ ಕಾಖಂಡಕಿ ಗ್ರಾಮದ ಅಗಡಿಯಲ್ಲಿ ಪಿರ್ಯಾಧಿದಾರರು ಒಂದು ಹಳೆಯ ಬಿಳಿ ಬಣ್ಣದ ಅಂಬಾಸಿಡರ್ ಕಾರ್ ನೋಂದಣಿ ಫಲಕದ ನಂಬರ್: ಜಿಡಿಇ:6666, ವಾಹನವನ್ನು ತಪಾಸಣೆ ಮಾಡಿ ರಹದಾರಿ ಪತ್ರ ವಗ್ಗೆರೆ ಇಲ್ಲದೆಯೇ ಸಾಗಾಣಿಕೆ ಮಾಡುತ್ತಿದ್ದ ರಾಯಲ್ ಗೋಲ್ಡ್ ಕಪ್ ವಿಸ್ಕಿ 180 ಮಿಲಿಯ 192 ಬಾಟ್ಲಿಗಳು ಮತ್ತು ರಾಜಾ ತ್ರಿಎಕ್ಸ್ ರಮ್ ಲೇಬಲ್‌ವುಳ್ಳ 180 ಮಿಲಿಯ 192 ಬಾಟ್ಲಿಗಳನ್ನು ಪತ್ತೆ ಮಾಡಿ ಶ್ಯಾಂಪಲ್ ಬಾಟ್ಲಿಗಳನ್ನು ತೆಗೆದು ಪಂಚನಾಮೆ ಕ್ರಮವನ್ನು ಜರುಗಿಸಿ ಈ ಪ್ರಾಧಿಕಾರಕ್ಕೆ ವರದಿಯನ್ನು ನೀಡಿರುತ್ತಾರೆ.

ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ಶ್ಯಾಂಪಲ್ ಬಾಟ್ಲಿಗಳನ್ನು ಅಬಕಾರಿ ಉಪ ತನಿಖಾಧಿಕಾರಿಗಳು ವಿಜಾಪೂರ ಉಪವಿಭಾಗ ಇವರು ದಿನಾಂಕ: 15.2.2002 ರಂದು ಉಪ ತನಿಖಾಧಿಕಾರಿಗಳು ವಿಜಾಪೂರ ನಗರ ಉಪವಲಯ ರವರು ರಸಾಯನಿಕ ತಜ್ಞರಿಗೆ ಕಳುಹಿಸಿ ಅವರಿಂದ ಪಡೆದ ರಸಾಯನಿಕ ವಿಶ್ಲೇಷಣಾ ವರದಿ ನಂ: ಸಿಸಿಎಲ್:1300:2002 ದಿನಾಂಕ: 18.2.2002 ರಂತೆ ವರದಿಯನ್ನು ನೀಡಿರುತ್ತಾರೆ. ಸದರಿ ವರದಿಯನ್ನು ಅವಲೋಕಿಸಿದಾಗ್ಗೆ ಜಪ್ತು ಮಾಡಿದ ಮಾದರಿಗಳ್ಳುಳ್ಳ ಬಾಟ್ಲಿಗಳನ್ನು ಮದ್ಯಸಾರದ ಅಂಶವು 42.4 ಡಿಗ್ರಿ ಯು.ಪಿ. ಮತ್ತು 46.3 ಡಿಗ್ರಿ ಯು.ಪಿ. ಇರುವುದಾಗಿ ತಿಳಿಸುತ್ತಾ, ವರದಿಯನ್ನು ನೀಡಿರುತ್ತಾರೆ. ಈ ಕಾರಣಗಳಿಂದ ಪಿರ್ಯಾಧಿದಾರರು ದಿನಾಂಕ: 23.12.2001 ರಂದು ಜಪ್ತು ಮಾಡಿದ ಮದ್ಯದ ಬಾಟ್ಲಿಗಳಲ್ಲಿ ಮದ್ಯಸಾರ ಇರುವುದು ದೃಢಪಟ್ಟಿರುತ್ತದೆ. ಈ ಕಾರಣಗಳಿಂದಾ ಆರೋಪಿತರಿಗೆ ಈ ಪ್ರಾಧಿಕಾರದ ಪತ್ರದ ನಂಬರ್:22:2001-2002, ದಿನಾಂಕ: 6.10.2003 ರಲ್ಲಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಬಿ) ಪ್ರಕಾರ ಕಾರಣ ಕೇಳುವ ನೋಟೀಸನ್ನು ಹೊರಡಿಸಲಾಗಿತ್ತು. ಈ ತತ್ಸಂಬಂಧ ಅಬಕಾರಿ ಉಪ ನಿರೀಕ್ಷಕರು ವಿಜಾಪೂರ ನಗರ ಉಪವಲಯ ಇವರು ಶ್ರೀ ಸುರೇಶ ಮುಂಡಗನೂರ, ಮುಧೋಳ ಇವರಿಗೆ ಜಾರಿ ಮಾಡಿ, ಜಾರಿ ಮಾಡಿದ ದಿನಾಂಕ: 29.10.2003 ರಂದು ಜಾರಿ ಮಾಡಿದ ಬಗ್ಗೆ ತಿಳಿಸಿರುತ್ತಾರೆ. ಆದರೆ ಇವರೇ ವಾಹನದ ಮಾಲೀಕರೆಂದು ದೃಢಪಡಿಸಲು ಈ ಪ್ರಾಧಿಕಾರದಲ್ಲಿ ಯಾವುದೇ ದಾಖಲೆಗಳು ಲಭ್ಯವಿರುವುದಿಲ್ಲಾ. ಮುಂದುವರಿಯುತ್ತಾ 1ನೇ ಮತ್ತು 2ನೇ ಆರೋಪಿತರಿಗೆ ಈ ಕಾರ್ಯಾಲಯದಿಂದ ಕಳುಹಿಸಿದ ಕಾರಣ ಕೇಳುವ ನೋಟೀಸು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. ಈ ಕಾರಣಗಳಿಂದಾ 9.2.2004 ರಂದು ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಕ್ರಮ ಸಂಖ್ಯೆ: 7 ರಲ್ಲಿ ಸೂಚಿಸುತ್ತಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಮಾಡಲು ಕ್ರಮವನ್ನು ಕೈಕೊಳ್ಳಲಾಗಿತ್ತು. ಈ ಕಾರಣಗಳಿಂದಾ ಸದರಿ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರ ಗುರುವಾರ ಮಾರ್ಚ್ 11, 2004 ರಂದು ಭಾಗ-3 ಪೇಜ್ ನಂಬರ್: 425 ರಲ್ಲಿ ಪ್ರಕಟಗೊಂಡಿರುತ್ತದೆ. ಸದರಿ ಪ್ರಕಟಣೆಯಾದ ಒಂದು ತಿಂಗಳ ನಂತರವೂ ಪಿರ್ಯಾಧಿದಾರರು ಜಪ್ತು ಮಾಡಿದ ವಾಹನದ ಬಗ್ಗೆಯಾಗಲೀ ಅಥವಾ ಜಪ್ತು ಮಾಡಿದ ಮಾದಕ ದ್ರವ್ಯದ ಬಾಟ್ಲಿಗಳ ಮೇಲೆ ಯಾರೇ ಆಗಲೀ ಮುಂದೆ ಬಂದು ತಮ್ಮ ಹಕ್ಕನ್ನು ನಿಗದಿತ ಅವಧಿಯ ಒಳಗೆ ಅರ್ಜಿಯನ್ನು ಸಲ್ಲಿಸಿರುವುದಿಲ್ಲಾ. ಈ ಕಾರಣಗಳಿಂದಾ ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ಒಂದು ಹಳೆಯ ಬಿಳಿ ಬಣ್ಣದ ಅಂಬಾಸಿಡರ್ ಕಾರ್ ನಂ: ಜಿಡಿಇ:6666, ಚಾಸಿಸ್ ನಂ: III:390079, ಇಂಜಿನ್ ನಂ:ಒಡಿಇ:51052, ವಾಹನವನ್ನು ಉಪಯೋಗಿಸಿಕೊಂಡು ಅನಧಿಕೃತವಾಗಿ ಮಾದಕ ದ್ರವ್ಯಗಳನ್ನು ಸಾಗಾಣಿಕೆ ಮಾಡಿರುವುದು ಈ ಪ್ರಾಧಿಕಾರದಲ್ಲಿ ಲಭ್ಯವಿರುವ ಪ್ರಥಮ ಮಾಹಿತಿಯ ವರದಿ, ರಸಾಯನಿಕ ತಜ್ಞರ ವರದಿ, ಪಂಚನಾಮೆ ಪ್ರತಿ, ಅವಲೋಕಿಸಿ ಅಪರಾಧವೆಸಗಿರುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾಗಿದೆ. ಮತ್ತು ಈ ಪ್ರಕರಣ ದಾಖಲಾಗಿ ಹಲವು ವರ್ಷಗಳು ಕಳೆದರೂ ಯಾರೇ ಆಗಲೀ ಮುಂದೆ ಬಂದು ತಮ್ಮ ಹಕ್ಕನ್ನು ಸ್ಥಾಪಿಸಿರುವುದಿಲ್ಲಾ. ಈ ಕಾರಣಗಳಿಂದಾ ಈ ಪ್ರಕರಣದಲ್ಲಿ ಜಪ್ತು ಮಾಡಿದ ವಾಹನ ಮತ್ತು ಮಾದಕ ದ್ರವ್ಯದ ಬಾಟ್ಲಿಗಳನ್ನು ಕರ್ನಾಟಕ ರಾಜ್ಯ ಸರ್ಕಾರಕ್ಕೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಮತ್ತು 43(ಎ) ಪ್ರಕಾರ ಮುಟ್ಟುಗೋಲು ಹಾಕಿಕೊಳ್ಳುವುದು ಉಚಿತವೆಂದು ಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಇಎಕ್ಸ್‌ಇ:ಸಿಆರ್:22:2001-02, ದಿನಾಂಕ: 28ನೇ ಏಪ್ರಿಲ್ 2004**

ಕೆ.ಆರ್. ಗೋವಿಂದಶೆಟ್ಟಿ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು, ವಿಜಾಪೂರ ಜಿಲ್ಲೆ ವಿಜಾಪೂರ ಆದ ನಾನು, ನನಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಮತ್ತು 43(ಸಿ) ದಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ

ಪಿರ್ಯಾಧಿದಾರರು ಗುನ್ನೆ ನಂಬರ್: 22:2001-02, ದಿನಾಂಕ: 23.12.2001 ರಲ್ಲಿ ಜಪ್ತು ಮಾಡಿದ ಒಂದು ಹಳೆಯ ಬಿಳಿ ಬಣ್ಣದ ಅಂಬಾಸಿಡರ್ ಕಾರ್ ನಂ: ಜಿಡಿಇ:6666, ಚಾಸಿಸ್ ನಂ: III:390079, ಇಂಜಿನ್ ನಂ:ಒಡಿಇ:51052, ವಾಹನವನ್ನು ಮತ್ತು ಜಪ್ತು ಮಾಡಿದ ರಾಯಲ್ ಗೋಲ್ಡ್ ಕಪ್ ವಿಸ್ಕಿಯ 180 ಮಿಲಿಯ 191 ಬಾಟ್ಲಿಗಳು ಮತ್ತು ರಾಜಾ ತ್ರಿಎಕ್ಸ್ ರಮ್ 180 ಮಿಲಿಯ 191 ಬಾಟ್ಲಿಗಳು (ಶ್ಯಾಂಪಲ್ ಬಾಟ್ಲಿ ಹೊರತುಪಡಿಸಿ) ಕರ್ನಾಟಕ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದೇನೆ.

ಈ ಆದೇಶವನ್ನು ದಿನಾಂಕ: 28.04.2004 ರಂದು ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ನನ್ನ ಸಹಿ ಮತ್ತು ಮೊಹರು ಹಾಕಿಹೊರಡಿಸಲಾಗಿದೆ. -

**ಕೆ.ಆರ್. ಗೋವಿಂದಶೆಟ್ಟಿ**

ಪಿ.ಆರ್. 692 ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ, ವಿಜಾಪೂರ.

**ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ, ವಿಜಾಪೂರ ಇವರ ನ್ಯಾಯಾಲಯದ ನಡುವಳಿ**

**ಪಿರ್ಯಾಧಿದಾರರು:** ಎಸ್.ಎಂ. ಕೆರೂರ, ಅಬಕಾರಿ ನಿರೀಕ್ಷಕರು, ವಿಜಾಪೂರ ಉಪವಿಭಾಗ,
ಗುನ್ನೆ ನಂ: 5:2003-04, ದಿನಾಂಕ: 6.1.2004

**ಆರೋಪಿತರು:** 1) ತಲೆ ಮರೆಸಿಕೊಂಡಿದ್ದಾನೆ.
2) ಯೆಜ್‌ಡಿ ಮೋಟಾರ್ ಸೈಕಲ್ ನಂಬರ್: ಸಿಎನ್‌ಡಬ್ಲ್ಯೂ:6332, ಚಾಸಿಸ್ ನಂ: ಐಜೆಡಿ:304270 ಮತ್ತು ಇಂಜಿನ್ ನಂ: ಐಜೆಡಿ-250143385

**ಪ್ರಸ್ತಾವನೆ:**

ದಿನಾಂಕ: 6.1.2004 ರಂದು ಪಿರ್ಯಾಧಿದಾರರು ವಾರಸುದಾರರು ಇಲ್ಲದ ಒಂದು ಹಳೆಯ ಯೆಜ್‌ಡಿ ಮೋಟಾರ್ ಸೈಕಲ್ ನಂಬರ್: ಸಿಎನ್‌ಡಬ್ಲ್ಯೂ:6332, ಚಾಸಿಸ್ ನಂಬರ್:ಐಜೆಡಿ:304270 ಮತ್ತು ಇಂಜಿನ್ ನಂಬರ್:ಐಜೆಡಿ-250143385 ಕರಿಯ ಬಣ್ಣದ್ದು, ವಾಹನವನ್ನು ವಿಜಾಪೂರ ತಾಲ್ಲೂಕಿನ ಉಪ್ಪಲದಿನ್ನಿ ಗ್ರಾಮದ ಬಸ್‌ಸ್ಟ್ಯಾಂಡ್ ಹತ್ತಿರ ದಿನಾಂಕ: 6.1.2004 ರಂದು 7.00 ಗಂಟೆಯ ಸಮಯದಲ್ಲಿ ತನಿಖೆಗೆ ಒಳಪಡಿಸಿದಾಗ್ಗೆ ಜಪ್ತು ಮಾಡಿದ ವಾಹನದ ಮೇಲೆ ಒಂದು ಕರಿಯ ಬಣ್ಣದ ಮೋಟಾರ್ ಟ್ಯೂಬಿನಲ್ಲಿ ಅಕ್ರಮವಾಗಿ ತಯಾರಿಸಿದ 20 ಲೀಟರ್ ಕಳ್ಳಭಟ್ಟಿ ಸರಾಯಿ ಪತ್ತೆ ಹಚ್ಚಿ ಮಾದರಿ ಸೀಸೆಯನ್ನು ತೆಗೆದು ಪಂಚನಾಮಾ ಕ್ರಮವನ್ನು ಜರುಗಿಸಿ ವಾಹನವನ್ನು ಮತ್ತು ಕಳ್ಳಭಟ್ಟಿ ಸರಾಯಿಯನ್ನು ಜಪ್ತು ಮಾಡಿ ಪ್ರಥಮ ಮಾಹಿತಿ ವರದಿ ನಂಬರ್: 5:2003-04, ದಿನಾಂಕ: 6.1.2004 ವಶಪಡಿಸಿಕೊಂಡ ಪದಾರ್ಥಗಳ ಪಟ್ಟಿ, ಪಂಚನಾಮಾ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಸದರಿ ಪ್ರಕರಣದಲ್ಲಿ ಆರೋಪಿತರು ಯಾರನ್ನೇ ಆಗಲಿ ಬಂಧಿಸಿರುವುದಿಲ್ಲಾ ಸದರಿ ಪ್ರಕರಣದಲ್ಲಿ ಪಿರ್ಯಾಧಿದಾರರು ತೆಗೆದ ಮಾದರಿ ಸೀಸೆಯನ್ನು ಸಬ್ ಇನ್ಸ್‌ಪೆಕ್ಟರ್ ಆಫ್ ಎಕ್ಸೈಜ್ ವಿಜಾಪೂರ ಉಪವಲಯ ರವರು 9.2.2004 ರಂದು ರಸಾಯನಿಕ ವಿಶ್ಲೇಷಣಾ ವರದಿಗಾಗಿ ಕಳುಹಿಸಿ ಅವರು ನೀಡಿದ ವರದಿ ನಂಬರ್: ಸಿಸಿಎಲ್:598:2004 ದಿನಾಂಕ: 10.2.2004 ರಂತೆ ವರದಿಯನ್ನು ನೀಡಿರುತ್ತಾರೆ. ಸದರಿ ವರದಿಯಲ್ಲಿ ಮಾದರಿ ಸೀಸೆಯನ್ನು ವಿಶ್ಲೇಷಣೆ ಮಾಡಿದ ವಿಶ್ಲೇಷಣಾಕಾರರು ಮಾದರಿ ಸೀಸೆಯಲ್ಲಿ ಇರುವ ದ್ರವ್ಯವನ್ನು ಪರಿಶೀಲನೆ ಮಾಡಿ ಮದ್ಯಸಾರದ ಅಂಶ 66.4 ಡಿಗ್ರಿ ಯು.ಪಿ. ಇದೆ ಎಂದು ತಿಳಿಸುತ್ತಾ ಮತ್ತು ಈ ದ್ರವ್ಯವು ಮಾನವ ಸೇವನೆಗೆ ಯೋಗ್ಯವಿಲ್ಲಾ ಎಂದು ತಿಳಿಸಿರುತ್ತಾರೆ. ಸದರಿ ಪ್ರಕರಣದಲ್ಲಿ ಆರೋಪಿ ಇಲ್ಲದೇ ಇರುವ ಪ್ರಯುಕ್ತ ವಾಹನದ ಮಾಲೀಕರು ಯಾರು ಎಂದು ತಿಳಿಯದೇ ಇರುವ ಪ್ರಯುಕ್ತ ಈ ಬಗ್ಗೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯನ್ನು ನೀಡಲು ದಿನಾಂಕ: 9.2.2004 ರಂದು ಕಾರಣ ಕೇಳುವ ನೋಟೀಸನ್ನು ಹೊರಡಿಸಲಾಗಿರುತ್ತೆ. ಸದರಿ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಪತ್ರ ಗುರುವಾರ ಮಾರ್ಚ್ 11, 2004 ರಂದು ಭಾಗ-3 ಪೇಜ್ ನಂಬರ್: 425 ರಲ್ಲಿ ಕ್ರಮಸಂಖ್ಯೆ:5 ರಲ್ಲಿ ಪ್ರಚಾರ ಬಂದಿರುತ್ತದೆ.

ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ನಂತರವೂ ಯಾರೇ ಆಗಲೀ ನಿಗದಿತ ಅವಧಿಯ ಒಳಗೆ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಜಪ್ತು ಮಾಡಿದ ವಾಹನ ಮತ್ತು ಕಳ್ಳಭಟ್ಟಿ ಸರಾಯಿ ಮೇಲೆ ಯಾರೇ ಆಗಲೀ ಮುಂದೆ ಬಂದು ತಮ್ಮ ಹಕ್ಕನ್ನು ಸ್ಥಾಪಿಸಿರುವುದಿಲ್ಲಾ. ಈ ಕಾರಣಗಳಿಂದಾ ಈ ಪ್ರಾಧಿಕಾರದಲ್ಲಿ ಲಭ್ಯವಿರುವ ಪ್ರಥಮ ಮಾಹಿತಿ ವರದಿ, ವಶಪಡಿಸಿಕೊಂಡ ಪದಾರ್ಥಗಳ ಪಟ್ಟಿ, ಪಂಚನಾಮಾ ಪ್ರತಿ, ರಸಾಯನಿಕ ತಜ್ಞರ ವರದಿಯನ್ನು ಅವಲೋಕಿಸಿ ಸದರಿ ಪ್ರಕರಣದಲ್ಲಿ ಅನಧಿಕೃತವಾಗಿ ಮದ್ಯಸಾರದ ಅಂಶವುಳ್ಳ ಕಳ್ಳಭಟ್ಟಿ ಸರಾಯಿಯನ್ನು ಒಂದು ಹಳೆಯ ಯೆಜ್‌ಡಿ ಮೋಟಾರ್ ಸೈಕಲ್ ನಂ: ಸಿಎನ್‌ಡಬ್ಲ್ಯೂ:6332 ವಾಹನವನ್ನು ಉಪಯೋಗಿಸಿಕೊಂಡು ಸಾಗಾಣಿಕೆ ಮಾಡಿರುವುದು ಈ ಪ್ರಾಧಿಕಾರಕ್ಕೆ ಮನವರಿಕೆಯಾದ ಪ್ರಯುಕ್ತ ಮತ್ತು ಯಾರೇ ವಾರಸುದಾರರು ಇಲ್ಲದ ಪ್ರಯುಕ್ತ ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ವಾಹನ ಮತ್ತು ಕಳ್ಳಭಟ್ಟಿ ಸರಾಯಿಯನ್ನು (ಶ್ಯಾಂಪಲ್ ಬಾಟ್ಲಿಗಳನ್ನು) ಹೊರತುಪಡಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಮತ್ತು 43(ಸಿ) ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಅವಶ್ಯವೆಂದು ಭಾವಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:112:2003-04, ದಿನಾಂಕ: 28ನೇ ಏಪ್ರಿಲ್ 2004**

ಕೆ.ಆರ್. ಗೋವಿಂದಶೆಟ್ಟಿ, ಅಬಕಾರಿ ಉಪ ಆಯುಕ್ತರು ಮತ್ತು ಪ್ರಾಧಿಕೃತ ಅಧಿಕಾರಿಗಳು ವಿಜಾಪೂರ ಜಿಲ್ಲೆ ವಿಜಾಪೂರ ಆದ ನಾನು, ನನಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಎ) ಮತ್ತು 43(ಸಿ) ದಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪಿರ್ಯಾಧಿದಾರರು ಗುನ್ನೆ ನಂಬರ್: 5:2003-04, ದಿನಾಂಕ: 6.1.2004 ರಲ್ಲಿ ಜಪ್ತು ಮಾಡಿದ ಒಂದು ಹಳೆಯ ಯೆಜ್‌ಡಿ ಮೋಟಾರ್ ಸೈಕಲ್ ನಂಬರ್: ಸಿಎನ್‌ಡಬ್ಲ್ಯೂ:6332, ಚಾಸ್ಸಿ ನಂ: ಐ.ಜೆ.ಡಿ. 304270, ಇಂಜಿನ್ ನಂಬರ್: ಐ.ಜೆ.ಡಿ. 250143385 ಮತ್ತು ಜಪ್ತು ಮಾಡಿದ 20 ಲೀಟರ್ ಕಳ್ಳಭಟ್ಟಿ ಸರಾಯಿಯನ್ನು ಕರ್ನಾಟಕ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದೇನೆ.

ಈ ಆದೇಶವನ್ನು ದಿನಾಂಕ: 28.04.2004 ರಂದು ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ನನ್ನ ಸಹಿ ಮತ್ತು ಮೊಹರು ಹಾಕಿ ಹೊರಡಿಸಲಾಗಿದೆ.

**ಕೆ.ಆರ್. ಗೋವಿಂದಶೆಟ್ಟಿ**

ಪಿ.ಆರ್. 693 ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ, ವಿಜಾಪೂರ.

**ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ, ವಿಜಾಪೂರ ಇವರ ನ್ಯಾಯಾಲಯದ ನಡುವಳಿ**

**ಪಿರ್ಯಾಧಿದಾರರು:** ಎಂ.ಬಿ. ಹಳ್ಳದಮನಿ, ಅಬಕಾರಿ ಉಪ ನಿರೀಕ್ಷಕರು, ವಿಜಾಪೂರ ನಗರ, ಉಪವಲಯ.
ಗುನ್ನೆ ನಂಬರ್: 35:2003-04, ದಿನಾಂಕ: 10.11.2003.

**ಆರೋಪಿತರು:** 1) ಆರೋಪಿಯು ಪರಾರಿ ಆಗಿರುವನು.
2) ವಾಹನದ ಮಾಲೀಕ. ಒಂದು ಕರಿಯ ಬಣ್ಣದ ಹಳೆಯ ಯೆಜ್‌ಡಿ ಮೋಟಾರ್ ಸೈಕಲ್ ಅದರ ನೋಂದಣಿ ನಂಬರ್: ಎಂಇಎಸ್:7420, ಇಂಜಿನ್ ನಂಬರ್: ಜೆಜೆಸಿಐ:2250038293, ಚಾಸ್ಸಿ ನಂಬರ್: ಸರಿಯಾಗಿ ಕಾಣುವುದಿಲ್ಲ.

**ಪ್ರಸ್ತಾವನೆ:**

ಪಿರ್ಯಾಧಿದಾರರು ದಿನಾಂಕ: 10.11.2003 ರಂದು ಮುಂಜಾನೆ 9.45 ಗಂಟೆಯ ಸಮಯದಲ್ಲಿ ವಿಜಾಪೂರ ಶಹರದ ಸಿಂದಗಿ ನಾಕಾದಲ್ಲಿ ಆರೋಪಿತರು ಪರಾರಿ ಆಗಿರುವ ಪ್ರಕರಣವನ್ನು ದಾಖಲಿಸುವ ಬಗ್ಗೆ ವಾರಸುದಾರರು ಇಲ್ಲದ ಯೆಜ್‌ಡಿ ಮೋಟಾರ್ ಸೈಕಲ್ ನಂಬರ್: ಎಂಇಎಸ್:7420, ವಾಹನವನ್ನು ತಪಾಸಣೆ ಮಾಡಿ ಒಂದು ಕರಿಯ ಬಣ್ಣದ ಟ್ಯೂಬಿನಲ್ಲಿ 20 ಲೀ. ಕಳ್ಳಭಟ್ಟಿ ಸರಾಯಿಯನ್ನು ಪಂಚನಾಮಾ ಕ್ರಮ ಜರುಗಿಸಿ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 11, 12, 14, 38(ಎ) ಪ್ರಕಾರ ದಾಖಲು ಮಾಡಿರುತ್ತಾರೆ. ಮತ್ತು ಗುನ್ನೆ ನಂಬರ್: 35:2003-04, ದಿನಾಂಕ: 10.11.2003 ರಂತೆ ಪ್ರಥಮ ಮಾಹಿತಿಯ ವರದಿಯನ್ನು, ಪಂಚನಾಮಾ ಪ್ರತಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ.

ಆರೋಪಿ ಇಲ್ಲದ ಈ ಪ್ರಕರಣ ದಾಖಲಾಗಿ ಹಲವು ತಿಂಗಳುಗಳು ಕಳೆದರೂ ಯಾರೇ ಆಗಲೀ ಮುಂದೆ ಬಂದು ಜಪ್ತು ಮಾಡಿದ ವಾಹನ, ಎಂಇಎಸ್:7420, ಮತ್ತು ಕಳ್ಳಭಟ್ಟಿ ಸರಾಯಿಯ ಮೇಲೆ ಯಾರೇ ಆಗಲಿ ಮುಂದೆ ಬಂದು ಈ ಪ್ರಾಧಿಕಾರದಲ್ಲಿ ಹಕ್ಕನ್ನು ಸ್ಥಾಪಿಸಿರುವುದಿಲ್ಲಾ. ಈ ಪ್ರಕರಣದಲ್ಲಿ ಪಿರ್ಯಾಧಿದಾರರು ಮಾದರಿ ಸೀಸೆಯನ್ನು 9.2.2004 ರಂದು ರಸಾಯನಿಕ ತಜ್ಞರಿಗೆ ಕಳುಹಿಸಿ ಈ ಪ್ರಾಧಿಕಾರಕ್ಕೆ ರಸಾಯನಿಕ ತಜ್ಞರ ವರದಿ ನಂಬರ್: ಸಿಸಿಎಲ್:599:2004, ದಿನಾಂಕ: 10.2.2004ರ ವರದಿಯನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ರಸಾಯನಿಕ ತಜ್ಞರ ವರದಿಯಂತೆ ಜಪ್ತು ಮಾಡಿದ ದ್ರವ್ಯದಲ್ಲಿ ಮದ್ಯಸಾರದ ಅಂಶ 66.4 ಡಿಗ್ರಿ ಯು.ಪಿ. ಇರುವುದಾಗಿ ತಿಳಿಸಿರುತ್ತಾರೆ. ಈ ಕಾರಣಗಳಿಂದಾ ಇಂತಹ ಸಾಗಾಣಿಕೆ ಮಾಡುವುದು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 11, 12ರ ಪ್ರಕಾರ ಅಪರಾಧವಾಗಿರುತ್ತದೆ. ಈ ಪ್ರಾಧಿಕಾರದಲ್ಲಿ ಲಭ್ಯವಿರುವ ದಾಖಲೆಗಳನ್ನು ಅವಲೋಕಿಸಿ ಸದರಿ ಪ್ರಕರಣದಲ್ಲಿ ಜಪ್ತು ಮಾಡಿದ ಯೆಜ್‌ಡಿ ಮೋಟಾರ್ ಸೈಕಲ್ ನಂಬರ್: ಎಂಇಎಸ್:7420, ವಾಹನವನ್ನು ರಾಜ್ಯ ಸರ್ಕಾರಕ್ಕೆ ಯಾಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬ ಬಗ್ಗೆ ಕರ್ನಾಟಕ ರಾಜ್ಯ ಪತ್ರ ಗುರುವಾರ ಮಾರ್ಚ್ 11, 2004 ಭಾಗ-3, ಪೇಜ್ ನಂಬರ್: 425ರ ಕ್ರಮಸಂಖ್ಯೆ:4 ರಲ್ಲಿ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆ ಆದ ನಿಗದಿತ ಅವಧಿಯ ಒಳಗೆ ಯಾರೇ ಆಗಲಿ ಮುಂದೆ ಬಂದು ಜಪ್ತು ಮಾಡಿದ ವಾಹನದ ಬಗ್ಗೆ ಹಕ್ಕನ್ನು ಸ್ಥಾಪಿಸಿರುವುದಿಲ್ಲಾ. ಆರೋಪಿತರು ಇಲ್ಲದ ಪ್ರಕರಣಗಳಲ್ಲಿ ಜಪ್ತು ಮಾಡಿದ ಮುದ್ದೇಮಾಲು, ವಾಹನವನ್ನು ಗುನ್ನೆ ದಾಖಲು ಆದ ದಿನಾಂಕದಿಂದ 30 ದಿನಗಳ ಒಳಗೆ ಯಾರೇ ಆಗಲೀ ಮುಂದೆ ಬಂದು ತಮ್ಮ ಹಕ್ಕನ್ನು ಸ್ಥಾಪಿಸದಿದ್ದಲ್ಲಿ ಜಪ್ತು ಮಾಡಿದ ವಾಹನ ಮತ್ತು ಮುದ್ದೇಮಾಲನ್ನು ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ಪ್ರಕಾರ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ನಿಯಮಗಳ ಅಡಿಯಲ್ಲಿ ಅವಕಾಶವಿರುತ್ತದೆ. ಆದಕಾರಣ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ಇಎಕ್ಸ್‌ಇ:ಸಿಆರ್‌ಎಂ:ಡಿಟಿಸಿಆರ್:90:2003-04, ದಿನಾಂಕ: 28ನೇ ಏಪ್ರಿಲ್ 2004**

ಕೆ.ಆರ್. ಗೋವಿಂದಶೆಟ್ಟಿ, ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ ವಿಜಾಪೂರ ಆದ ನಾನು, ನನಗೆ ಕರ್ನಾಟಕ ರಾಜ್ಯ ಅಬಕಾರಿ ಕಾಯ್ದೆ 1965ರ ಕಲಂ 43(ಸಿ) ದಲ್ಲಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಪಿರ್ಯಾಧಿದಾರರು ಗುನ್ನೆ ನಂಬರ್: 35:2003-04, ದಿನಾಂಕ: 10.11.2003 ರಲ್ಲಿ ಜಪ್ತು ಮಾಡಿದ ಒಂದು ಕರಿಯ ಬಣ್ಣದ ಹಳೆಯ ಯೆಜ್‌ಡಿ ಮೋಟರ್ ಸೈಕಲ್ ನೋಂದಣಿ ನಂಬರ್: ಎಂಇಎಸ್:7420, (ಇಂಜಿನ್ ನಂಬರ್:ಜೆಜೆಸಿ:ಎಲ್:2250038293, ಚಾಸಿಸ್ ನಂಬರ್ ಕಾಣುವುದಿಲ್ಲಾ) ಈ ವಾಹನವನ್ನು ಮತ್ತು ಜಪ್ತು ಮಾಡಿದ 20 ಲೀಟರ್ ಕಳ್ಳಭಟ್ಟಿ ಸರಾಯಿಯನ್ನು (ಶ್ಯಾಂಪಲ್ ಬಾಟ್ಲಿ ಹೊರತುಪಡಿಸಿ) ಕರ್ನಾಟಕ ರಾಜ್ಯ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿದ್ದೇನೆ.

ಈ ಆದೇಶವನ್ನು ದಿನಾಂಕ: 28.04.2004 ರಂದು ಬೆರಳಚ್ಚು ಮಾಡಿಸಿ ತಪ್ಪುಗಳನ್ನು ತಿದ್ದಿ ನನ್ನ ಸಹಿ ಮತ್ತು ಮೊಹರು ಹಾಕಿ ಹೊರಡಿಸಲಾಗಿದೆ. -

**ಕೆ.ಆರ್. ಗೋವಿಂದಶೆಟ್ಟಿ**

ಪಿ.ಆರ್. 694 ಪ್ರಾಧಿಕೃತ ಅಧಿಕಾರಿ ಹಾಗೂ ಅಬಕಾರಿ ಉಪ ಆಯುಕ್ತರು ವಿಜಾಪೂರ ಜಿಲ್ಲೆ, ವಿಜಾಪೂರ.

**ಪೊಲೀಸ್ ಕಮೀಷನರ್ ರವರ ಕಛೇರಿ, ನಂ.1, ಇನ್‌ಪೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ ಸಂಖ್ಯೆ: 18/ಸಂಪಿ/ಸಿ.ಓ.ಪಿ./2004, ದಿನಾಂಕ: 5ನೇ ಮೇ 2004**

ಬೆಂಗಳೂರು ನಗರ, ಮಡಿವಾಳ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಯಲ್ಲಿ ಬರುವ ಮಾರುತಿನಗರ ಮುಖ್ಯ ರಸ್ತೆಯು ಹೊಸೂರು ಮುಖ್ಯ ರಸ್ತೆಯಿಂದ ಬಿ.ಟಿ.ಎಂ. 20ನೇ ಮುಖ್ಯ ರಸ್ತೆಯನ್ನು ಸೇರುವ ದ್ವಿಮುಖ ಸಂಚಾರದ ರಸ್ತೆಯಾಗಿರುತ್ತದೆ. ಈ ರಸ್ತೆಯ

ಅಗಲವು ಅತ್ಯಂತ ಕಿರಿದಾಗಿದ್ದು ರಸ್ತೆಯ ಎರಡೂ ಬದಿಗಳಲ್ಲಿ ವಾಣಿಜ್ಯ ಮಳಿಗೆಗಳು, ವ್ಯಾಪಾರ ಮಳಿಗೆಗಳು, ಶಾಲೆಗಳು, ಆಸ್ಪತ್ರೆಗಳು ಮತ್ತು ವಾಸ್ತವ್ಯದ ನಿವಾಸಗಳು ಇದ್ದು ಇತ್ತೀಚೆಗೆ ವಾಹನ ಸಂಚಾರ ಅಧಿಕಗೊಂಡು ಸುಗಮ ಸಂಚಾರಕ್ಕೆ ಅಡ್ಡಿ ಉಂಟಾಗುತ್ತಿರುವುದು ಮತ್ತು ವಾಹನ ಸಂಚಾರದಲ್ಲಿ ನಿಧಾನಗತಿ ಉಂಟಾಗಿರುವುದು ಕಂಡು ಬಂದಿರುತ್ತದೆ. ಈ ರಸ್ತೆಯಲ್ಲಿ ವಾಹನ ಸಂಚಾರವನ್ನು ಸುಗಮಗೊಳಿಸಲು ಸಾರ್ವಜನಿಕ ಹಿತಾಸಕ್ತಿ ಗಮನಿಸಿ ಹಾಲಿ ಇರುವ ದ್ವಿಮುಖ ಸಂಚಾರ ವ್ಯವಸ್ಥೆಯನ್ನು ನಿರ್ಬಂಧಿಸಿ ಏಕ ಮುಖ ಸಂಚಾರ ವ್ಯವಸ್ಥೆಯನ್ನು ಜಾರಿಗೊಳಿಸುವುದು ಅವಶ್ಯಕವೆಂದು ಕಂಡು ಬಂದಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಎಸ್. ಮರಿಸ್ವಾಮಿ, ಐ.ಪಿ.ಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

1. ಬಿ.ಟಿ.ಎಂ. 20ನೇ ಮುಖ್ಯ ರಸ್ತೆ ಮತ್ತು ಮಾರುತಿನಗರ ಮುಖ್ಯ ರಸ್ತೆಯು ಸಂಧಿಸುವ ಸ್ಥಳದಿಂದ ಹೊಸೂರು ಮುಖ್ಯ ರಸ್ತೆಯ ಕಡೆಗೆ ಹರಿಯುವ ಸಂಚಾರವನ್ನು ಯಥಾಸ್ಥಿತಿಯಲ್ಲಿರಿಸಿಕೊಂಡು ವಿರುದ್ಧ ದಿಕ್ಕಿನಿಂದ ಅಂದರೆ ಹೊಸೂರು ಮುಖ್ಯ ರಸ್ತೆಯ ಕಡೆಯಿಂದ ಮಾರುತಿನಗರ ಮುಖ್ಯ ರಸ್ತೆಯ ಮೂಲಕ ಹಾಯ್ದು ಬಿ.ಟಿ.ಎಂ. 20ನೇ ಮುಖ್ಯ ರಸ್ತೆ ಕಡೆಗೆ ಸಂಚಾರವನ್ನು ನಿಷೇಧಿಸಲಾಗಿದೆ.

2. ಹೊಸೂರು ಮುಖ್ಯ ರಸ್ತೆಯ ಕಡೆಯಿಂದ ಮಾರುತಿ ನಗರ ಮುಖ್ಯ ರಸ್ತೆಯ ಮೂಲಕ ಬಿ.ಟಿ.ಎಂ. 20ನೇ ಮುಖ್ಯ ರಸ್ತೆ ಕಡೆಗೆ ಸಂಚಾರವನ್ನು ಹೊಸೂರು ಮುಖ್ಯ ರಸ್ತೆಯಲ್ಲಿ ಮುಂದುವರೆಸಿ ಕೇಂದ್ರ ರೇಷ್ಮೆ ಮಂಡಳಿ ಮೇಲು ಸೇತುವೆ ಕೆಳಗಿನ ರಸ್ತೆಯಲ್ಲಿ ಬಲತಿರುವು ಪಡೆದು ಬಿ.ಟಿ.ಎಂ. ವರ್ತುಲ ರಸ್ತೆಯನ್ನು ಸೇರಿ ಸಂಚರಿಸಲು ಅಥವಾ ಮಡಿವಾಳ ಹಳೇ ಉಕ್ಕಡ ವೃತ್ತದಲ್ಲಿ ಎಡ ತಿರುವು ಪಡೆದು ತಾವರೆಕೆರೆ ಮುಖ್ಯ ರಸ್ತೆಯಲ್ಲಿ ಸಂಚರಿಸಿ ಬಿ.ಟಿ.ಎಂ. 20ನೇ ಮುಖ್ಯ ರಸ್ತೆಯನ್ನು ಸೇರುವ ಅವಕಾಶ ಕಲ್ಪಿಸಿಕೊಡಲಾಗಿದೆ.

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸಹ ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 05.05.2004 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 05.05.2004 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಎಸ್. ಮರಿಸ್ವಾಮಿ**

ಪಿ.ಆರ್. 695 ಪೊಲೀಸ್ ಕಮೀಷನರ್, ಬೆಂಗಳೂರು ನಗರ.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಅಮಲ್ಜಾರಿ ಸಂಖ್ಯೆ: ಸಿಇಪಿ/122/2001-02, ಎಂ.ಆರ್. ಶ್ರೀನಿವಾಸಮೂರ್ತಿ ಬಿನ್ ಲೇ. ಎಂ. ರಂಗಯ್ಯ ಇವರ ಸ್ಥಿರಾಸ್ತಿಯನ್ನು ಹೋಲ್ಡರ್ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿ., ತುಮಕೂರು ಇವರ ಪತ್ರ ಸಂಖ್ಯೆ: 1447/03-04, ದಿನಾಂಕ: 21.8.2002 ಮತ್ತು 16.5.2003.

2) ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ವೀರಶೈವ ಸಹಕಾರ ಬ್ಯಾಂಕ್ ನಿ., ತುಮಕೂರು ಇವರ ಪತ್ರ ದಿ:

3) ಈ ಕಛೇರಿಯ ನೋಟೀಸ್ ಸಂಖ್ಯೆ: ಎಆರ್‌ಟಿ ದಾವೆ ಸಂಖ್ಯೆ: 2003-04, ದಿನಾಂಕ: 4.6.2003.

**ಪ್ರಸ್ತಾವನೆ:**

ಶ್ರೀ ಎಂ.ಆರ್. ಶ್ರೀನಿವಾಸ್‌ಮೂರ್ತಿ ಬಿನ್ ಲೇ. ಎಂ. ರಂಗಯ್ಯ ಇವರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ, ತುಮಕೂರು ಈ ಬ್ಯಾಂಕಿನಲ್ಲಿ ಸಾಲ ಪಡೆದು ಸುಸ್ತಿಯಾದ ಹಿನ್ನೆಲೆಯಲ್ಲಿ ದಿನಾಂಕ: 23.3.1999 ರಂದು ಡಿಕ್ರಿ ಪಡೆದು ಅಮಲ್ಜಾರಿ ಸಂಖ್ಯೆ: ಸಿಇಡಿ. ಸಂಖ್ಯೆ: 122/2001-02ರ ರೀತ್ಯ ಅಮಲ್ಜಾರಿ ಕ್ರಮ ಜರುಗಿಸಿ ಅಮಲ್ಜಾರಿ ಬಾಕಿ ರೂ.119180/- ಗಳನ್ನು ವಸೂಲಿ ಮಾಡಿಕೊಳ್ಳಲು ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಬಿನ್ ಲೇಟ್ ರಂಗಯ್ಯ ಇವರ ಸ್ಥಿರಾಸ್ತಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 24.8.2000, 26.03.2001, 17.8.2001 ದಿನಾಂಕಗಳಂದು ನಿಗದಿಪಡಿಸಲಾಗಿತ್ತು. ಸದರಿ ದಿನಾಂಕಗಳಲ್ಲಿ ಬಿಡ್‌ದಾರರು ಯಾರು ಬಾರದಿದ್ದ ಪ್ರಯುಕ್ತ ಬಹಿರಂಗ ಹರಾಜನ್ನು ಮುಂದೂಡಲಾಯಿತು. ಅಂತಿಮವಾಗಿ ದಿನಾಂಕ: 3.12.2001 ರಂದು ಮತ್ತೆ ನಿಯಮಾನುಸಾರ ಹರಾಜು ನಿಗದಿಪಡಿಸಿ ಹರಾಜು ಮಾಡಲಾಗಿ ಸದರಿ ಬಹಿರಂಗ ಹರಾಜಿನಲ್ಲಿ ಯಾರು ಬಿಡ್‌ದಾರರು ಭಾಗವಹಿಸದೆ ಇದ್ದ ಪ್ರಯುಕ್ತ ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಕೋಂ ಲೇಟ್ ರಂಗಯ್ಯ ಇವರಿಂದ ಬ್ಯಾಂಕಿಗೆ ಬಾಕಿಯಿರುವ ರೂ.119180/- ಗಳಿಗೆ ಸದರಿಯವರ ಚಿರಾಸ್ಥಿಯನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲು ಕೋರಿ ಉಲ್ಲೇಖ (1) ರಲ್ಲಿ ಮಾರಾಟಾಧಿಕಾರಿಗಳು ಹಾಗೂ ಉಲ್ಲೇಖ (2) ರಲ್ಲಿ ನಮೂದಿಸಿರುವ ಪತ್ರದಲ್ಲಿ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಕೋರಿರುತ್ತಾರೆ.

ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಬಿನ್ ಲೇಟ್ ರಂಗಯ್ಯ ಇವರಿಗೆ ಈ ಬಗ್ಗೆ ಆಕ್ಷೇಪಣೆಗಳನ್ನು ಸಲ್ಲಿಸಲು ಸಾಕಷ್ಟು ಕಾಲಾವಕಾಶ ನೀಡಿ ಉಲ್ಲೇಖ (3) ರಲ್ಲಿ ನಮೂದಿಸಿರುವಂತೆ ನೋಟೀಸ್ ನೀಡಲಾಗಿತ್ತು. ಆದರೆ ಸದರಿಯವರು ದಿನಾಂಕ: 26.6.2003 ರಂದು ಪೂರ ಸಾಲ ತೀರುವಳಿ ಮಾಡಲು ಕಾಲಾವಧಿ ಕೋರಿದ್ದು ಕಾಲ ನೀಡಿದರೂ ಸಹ ಸಾಲ ತೀರುವಳಿ ಮಾಡಲು ವಿಫಲರಾದ ಪ್ರಯುಕ್ತ ಉಲ್ಲೇಖ (1) ಮತ್ತು (2)ರ ಪತ್ರದಲ್ಲಿ ಮಾರಾಟಾಧಿಕಾರಿಗಳು ಮತ್ತು ಬ್ಯಾಂಕಿನ ಮುಖ್ಯಕಾರ್ಯನಿರ್ವಹಣಾಧಿಕಾರಿಯವರ ಕೋರಿಕೆಯಂತೆ ಈ ಕೆಳಕಂಡ ಸ್ಥಿರಾಸ್ತಿಯ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶ ನೀಡಲಾಗಿದೆ.

**ಆದೇಶ ಸಂಖ್ಯೆ: ಎ.ಆರ್.ಟಿ.ಎ.ಬಿ.ಎಸ್/ /2003-04, ದಿನಾಂಕ: 31ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಬಿ. ಜಯಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಅನ್ವಯ ರೂಪಿಸಲಾದ ಕರ್ನಾಟಕ ಸಹಕಾರ ಸಂಘಗಳ ನಿಯಮ 38 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ 69 ಸಿಎಲ್ಎಂ 2001, ದಿನಾಂಕ: 21.11.2001ರ ಪ್ರಕಾರ ಪ್ರತ್ಯೋಜಿಸಲ್ಪಟ್ಟಿರುವ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಬಿನ್ ಲೇಟ್ ರಂಗಯ್ಯ ಇವರ ಸ್ಥಿರಾಸ್ತಿಯನ್ನು ದಿನಾಂಕ: 3.12.2001 ರಂದು ಬಹಿರಂಗ ಹರಾಜಿನಲ್ಲಿ ಬ್ಯಾಂಕಿಗೆ ಬರಬೇಕಾದ ಸಾಲದ ಮೊತ್ತ ರೂ.1,19,180/- (ಒಂದು ಲಕ್ಷ ಹತ್ತೊಂಬತ್ತು ಸಾವಿರದ ಒಂದು ನೂರ ಎಂಬತ್ತು ರೂ.) ಯಾರು ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸದೇ ಇರುವ ಪ್ರಯುಕ್ತ ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಬಿನ್ ಲೇಟ್ ರಂಗಯ್ಯ ಇವರ ತಿಪಟೂರು ಟೌನ್ ಸಿ. ವಿಭಾಗದ ಗೋವಿನಪುರ ಬಡಾವಣೆ ಪುರಸಭೆ ವತಿಯಿಂದ ವಿಂಗಡಿಸಿದ ನಿವೇಶನಗಳ ಪೈಕಿ ಮುನ್ಸಿಪಲ್ ಖಾತೆ ನಂ:4460/- 5 ಸೈಟ್ ನಂ.10 ಆಗಿದ್ದು ಇದರ ಅಳತೆ ಪೂರ್ವ, ಪಶ್ಚಿಮ 40 ಅಡಿಗಳು, ಉತ್ತರ ದಕ್ಷಿಣ 30 ಅಡಿಗಳುಳ್ಳ ಸ್ಥಿರಾಸ್ತಿಯನ್ನು ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶವನ್ನು ಷರತ್ತು ನಿಯಮಗಳಿಗೆ ಬಳಸಲು ಈ ಸ್ಥಿರೀಕರಣ ಆದೇಶ ನೀಡಿರುತ್ತೇನೆ. ಸಹಕಾರ ಸಂಘಗಳ ಕಾಯ್ದೆಯ ಅನ್ವಯ ನಿಗದಿತ ನಮೂನೆ-VIII ರಂತೆ ಸ್ಥಿರ ಸ್ವತ್ತು ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

**ಷರತ್ತುಗಳು ಮತ್ತು ನಿಯಮಗಳು**

1. ಬ್ಯಾಂಕಿಗೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತನ್ನು ಉಪಯೋಗಿಸತಕ್ಕದ್ದು.
2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.
3. ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಬ್ಯಾಂಕಿಗೆ ಜಮಾ - ಖರ್ಚು ಮಾಡಿಕೊಡತಕ್ಕದ್ದು.

ಈ ಕಛೇರಿಯ ಮುದ್ರೆ ಮತ್ತು ನನ್ನ ಸಹಿಯೊಂದಿಗೆ ದಿನಾಂಕ: 31.1.2004 ರಂದು ಆದೇಶ ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು.

**ನಮೂನೆ VIII**

**(ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38 (ಎ) )**

**ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101ರ ಅನ್ವಯ ಪರ ಬಾಕಿ ಬಗ್ಗೆ.**

**ಪ್ರಮಾಣ ಪತ್ರ**

ಶ್ರೀ ವೀರಶೈವ ಸಹಕಾರ ಬ್ಯಾಂಕ್ ನಿಯಮಿತ, ತುಮಕೂರು ಇವರ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಇವರು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 71ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಎಂ.ಆರ್. ಶ್ರೀನಿವಾಸಮೂರ್ತಿ ಬಿನ್ ಲೇಟ್ ರಂಗಯ್ಯ, ತಿಪಟೂರು ಇವರ ಸ್ಥಿರ ಸ್ವತ್ತು ಮಾರಾಟದ ದಿನಾಂಕ: 3.12.2001 ರಂದು ಬಹಿರಂಗ ಹರಾಜಿನಲ್ಲಿಟ್ಟಿದ್ದು ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದಿರುವುದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ವಸೂಲಿ ಅಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು, ಅಧಿಕಾರನಾಮ ಮತ್ತು ಬಾಧ್ಯತೆ ಶ್ರೀ ವೀರಶೈವ ಸಹಕಾರ ಬ್ಯಾಂಕ್ ನಿಯಮಿತ ತುಮಕೂರಿನಲ್ಲಿ ನಿರ್ದಿಷ್ಟವಾಗಿರತಕ್ಕದೆಂದು ಮತ್ತು ಈ ಆದೇಶಕ್ಕೆ ಇಲ್ಲಿ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಂತೆ ಸದರಿ ಅಧಿನಿಯಮ 101 ಬಿ. ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಸ್ವತ್ತಿನ ವಿವರಗಳು**

ತುಮಕೂರು ಜಿಲ್ಲೆ, ತಿಪಟೂರು ಟೌನ್ ಸಿ. ವಿಭಾಗದ ಗೋವಿನಪುರ ಬಡಾವಣೆ ಪುರಸಭೆ ವತಿಯಿಂದ ವಿಂಗಡಿಸಿದ ನಿವೇಶನಗಳ ಪೈಕಿ ಮುನಿಸಿಪಲ್ ಖಾತೆ ನಂ.4466/- 5 ಸೈಟ್ ನಂ.10 ಆಗಿದ್ದು ಇದರ ಅಳತೆ ಪೂರ್ವ-ಪಶ್ಚಿಮ 40 ಅಡಿಗಳು, ಉತ್ತರ ದಕ್ಷಿಣ 30 ಅಡಿಗಳುಳ್ಳ ಸ್ವತ್ತು ಇವಕ್ಕೆ ಚಕ್ಕುಬಂದಿ ಪೂರ್ವಕ್ಕೆ ಸೈಟ್ ನಂ.09, ಪಶ್ಚಿಮಕ್ಕೆ ಸೈಟ್ ನಂ.11, ಉತ್ತರಕ್ಕೆ ಕನ್ಸರ್ವೆನ್ಸಿ ದಕ್ಷಿಣಕ್ಕೆ ರಸ್ತೆ, ಈ ಮಧ್ಯ ಇರುವ ಸ್ವತ್ತು.

ಪಿ.ಆರ್. 696 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಅಮಲ್ಜಾರಿ ಸಂಖ್ಯೆ: ಸಿಇಪಿ/515/2001-02, ಶ್ರೀ ಟಿ.ಟಿ. ಶ್ರೀನಿವಾಸ ಬಿನ್ ತಿರುಪತಪ್ಪ ಇವರ ಸ್ಥಿರಾಸ್ತಿಯನ್ನು ಹೋಲ್ಡರ್ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿ., ತುಮಕೂರು ಇವರ ಪತ್ರ ಸಂಖ್ಯೆ: 1447/03-04, ದಿನಾಂಕ: 21.8.2002 ಮತ್ತು 16.5.2003.

2) ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ವೀರಶೈವ ಸಹಕಾರ ಬ್ಯಾಂಕ್ ನಿ., ತುಮಕೂರು ಇವರ ಪತ್ರ ದಿ:

3) ಈ ಕಛೇರಿಯ ನೋಟೀಸ್ ಸಂಖ್ಯೆ: ಎಆರ್‌ಟಿ ದಾವೆ ಸಂಖ್ಯೆ: 2003-04, ದಿನಾಂಕ: 4.6.2003.

**ಪ್ರಸ್ತಾವನೆ:**

ಶ್ರೀ ಟಿ.ಟಿ. ಶ್ರೀನಿವಾಸ ಬಿನ್ ತಿರುಪತಪ್ಪ ಇವರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ, ತುಮಕೂರು ಈ ಬ್ಯಾಂಕಿನಲ್ಲಿ ಸಾಲ ಪಡೆದು ಸುಸ್ತಿಯಾದ ಹಿನ್ನೆಲೆಯಲ್ಲಿ ದಿನಾಂಕ: 23.3.1999 ರಂದು ಡಿಕ್ರಿ ಪಡೆದು ಅಮಲ್ಜಾರಿ ಸಂಖ್ಯೆ: ಸಿಇಪಿ. ಸಂಖ್ಯೆ: 515/2000-01ರ ರೀತ್ಯ ಅಮಲ್ಜಾರಿ ಕ್ರಮ ಜರುಗಿಸಿ ಅಮಲ್ಜಾರಿ ಬಾಕಿ ರೂ.188940/- ಗಳನ್ನು ವಸೂಲಿ ಮಾಡಿಕೊಳ್ಳಲು ಶ್ರೀ ಡಿ. ರಾಮಯ್ಯ ಬಿನ್ ದೊಡ್ಡಯ್ಯ ಇವರ ಸ್ಥಿರಾಸ್ತಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 23.3.2001, 14.08.2001, 3.12.2001 ರಂದು ನಿಗದಿಪಡಿಸಲಾಗಿತ್ತು. ಸದರಿ ದಿನಾಂಕಗಳಲ್ಲಿ ಬಿಡ್‌ದಾರರು ಯಾರು ಬಾರದಿದ್ದ ಪ್ರಯುಕ್ತ ಬಹಿರಂಗ ಹರಾಜನ್ನು ಮುಂದೂಡಲಾಯಿತು. ಅಂತಿಮವಾಗಿ ದಿನಾಂಕ: 12.7.2002 ರಂದು ಮತ್ತೆ ನಿಯಮಾನುಸಾರ ಹರಾಜು ನಿಗದಿಪಡಿಸಿ ಹರಾಜು ಮಾಡಲಾಗಿ ಸದರಿ ಬಹಿರಂಗ ಹರಾಜಿನಲ್ಲಿ ಯಾರು ಬಿಡ್‌ದಾರರು ಭಾಗವಹಿಸದೆ ಇದ್ದ ಪ್ರಯುಕ್ತ ಶ್ರೀ ಟಿ.ಟಿ. ಶ್ರೀನಿವಾಸ ಬಿನ್ ತಿರುಪತಪ್ಪ ಇವರಿಂದ, ಬ್ಯಾಂಕಿಗೆ ಬಾಕಿಯಿರುವ ಒಟ್ಟು ರೂ.188940/- ಗಳಿಗೆ ಸದರಿಯವರ ಚಿರಾಸ್ಥಿಯನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲು ಕೋರಿ ಉಲ್ಲೇಖ (1) ರಲ್ಲಿ ಮಾರಾಟಾಧಿಕಾರಿಗಳು ಹಾಗೂ ಉಲ್ಲೇಖ (2) ರಲ್ಲಿ ನಮೂದಿಸಿರುವ ಪತ್ರದಲ್ಲಿ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಕೋರಿರುತ್ತಾರೆ.

ಶ್ರೀ ಟಿ.ಟಿ. ಶ್ರೀನಿವಾಸ ಬಿನ್ ತಿರುಪತಪ್ಪ ಇವರಿಗೆ ಈ ಬಗ್ಗೆ ಆಕ್ಷೇಪಣೆಗಳನ್ನು ಸಲ್ಲಿಸಲು ಸಾಕಷ್ಟು ಕಾಲಾವಕಾಶ ನೀಡಿ ಉಲ್ಲೇಖ (3) ರಲ್ಲಿ ನಮೂದಿಸಿರುವಂತೆ ನೋಟೀಸ್ ನೀಡಲಾಗಿತ್ತು. ಆದರೆ ಸದರಿಯವರು ಈವರೆವಿಗೂ ಯಾವುದೇ ಆಕ್ಷೇಪಣೆ ಸಲ್ಲಿಸಲು ಹಾಗೂ ಬಾಕಿಯ ಹಣವನ್ನು ಬ್ಯಾಂಕಿಗೆ ಪಾವತಿಸಲು ವಿಫಲರಾಗಿರುತ್ತಾರೆ. ಪ್ರಯುಕ್ತ ಉಲ್ಲೇಖ (1) ಮತ್ತು (2)ರ ಪತ್ರದಲ್ಲಿ ಮಾರಾಟಾಧಿಕಾರಿಗಳು ಮತ್ತು ಬ್ಯಾಂಕಿನ ಮುಖ್ಯಕಾರ್ಯನಿರ್ವಹಣಾಧಿಕಾರಿಯವರ ಕೋರಿಕೆಯಂತೆ ಈ ಕೆಳಕಂಡ ಸ್ಥಿರಾಸ್ತಿಯ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶ ನೀಡಲಾಗಿದೆ.

**ಆದೇಶ ಸಂಖ್ಯೆ: ಎ.ಆರ್.ಟಿ.ಎ.ಬಿ.ಎನ್/ /2003-04, ದಿನಾಂಕ: 31ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಬಿ. ಜಯಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಅನ್ವಯ ರೂಪಿಸಲಾದ ಕರ್ನಾಟಕ ಸಹಕಾರ ಸಂಘಗಳ ನಿಯಮ 38 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿನಾಂಕ: 21.11.2001ರ ಪ್ರಕಾರ ಪ್ರತ್ಯೋಜಿಸಲ್ಪಟ್ಟಿರುವ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಟಿ.ಟಿ. ಶ್ರೀನಿವಾಸ ಬಿನ್ ತಿರುಪತಪ್ಪ ಇವರ ಸ್ಥಿರಾಸ್ತಿಯನ್ನು ದಿನಾಂಕ: 11.07.2002 ರಂದು ಬಹಿರಂಗ ಹರಾಜಿನಲ್ಲಿ ಬ್ಯಾಂಕಿಗೆ ಬರಬೇಕಾದ ಸಾಲದ ಮೊತ್ತ ರೂ.188940/- (ಒಂದು ಲಕ್ಷದ ಎಂಭತ್ತೆಂಟು ಸಾವಿರದ ಒಂಭತ್ತು ನೂರ ನಲವತ್ತು) ಯಾರು ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸದೇ ಇರುವ ಪ್ರಯುಕ್ತ ಶ್ರೀ ಟಿ.ಟಿ. ಶ್ರೀನಿವಾಸ ಬಿನ್ ತಿರುಪತಪ್ಪ ತಿಪಟೂರು ಟೌನ್ ವಿ ವಿಭಾಗದ ಕೋಟೆ ಬಡಾವಣೆ ತಿಪಟೂರು ಮುನ್ಸಿಪಲ್ ವ್ಯಾಪ್ತಿಗೊಳಪಟ್ಟು ಮುನ್ಸಿಪಲ್ ಖಾತೆ ನಂ.440 ಆಗಿದ್ದು ಇದರಲ್ಲಿರುವ ಕಟ್ಟಡ ಸೇರಿ ಒಟ್ಟು ಅಳತೆ ಪೂರ್ವ, ಪಶ್ಚಿಮ 22 ಅಡಿಗಳು, ಉತ್ತರ ದಕ್ಷಿಣ 37 3/4 ಅಡಿಗಳು ಈ ಸ್ಥಿರಾಸ್ತಿಯನ್ನು ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶವನ್ನು ಷರತ್ತು ನಿಯಮಗಳಿಗೆ ಬಳಸಲು ಈ ಸ್ಥಿರೀಕರಣ ಆದೇಶ ನೀಡಿರುತ್ತೇನೆ. ಸಹಕಾರ ಸಂಘಗಳ ಕಾಯ್ದೆಯ ಅನ್ವಯ ನಿಗದಿತ ನಮೂನೆ-VIII ರಂತೆ ಸ್ಥಿರ ಸ್ವತ್ತು ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

**ಷರತ್ತುಗಳು ಮತ್ತು ನಿಯಮಗಳು**

1. ಬ್ಯಾಂಕಿಗೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತನ್ನು ಉಪಯೋಗಿಸತಕ್ಕದ್ದು.
2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.
3. ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಬ್ಯಾಂಕಿಗೆ ಜಮಾ - ಖರ್ಚು ಮಾಡಿಕೊಡತಕ್ಕದ್ದು.

ಈ ಕಛೇರಿಯ ಮುದ್ರೆ ಮತ್ತು ನನ್ನ ಸಹಿಯೊಂದಿಗೆ ದಿನಾಂಕ: 31.1.2004 ರಂದು ಆದೇಶ ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು.

**ನಮೂನೆ VIII**

**(ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38 (ಎ) )**

**ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101ರ ಅನ್ವಯ ಪರ ಬಾಕಿ ಬಗ್ಗೆ.**

**ಪ್ರಮಾಣ ಪತ್ರ**

ಶ್ರೀ ವೀರಶೈವ ಸಹಕಾರ ಬ್ಯಾಂಕ್ ನಿಯಮಿತ, ತುಮಕೂರು ಇವರ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಇವರು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 71ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಶ್ರೀನಿವಾಸ ಬಿನ್ ತಿರುಪತಪ್ಪ ತಿಪಟೂರು ಇವರ ಸ್ಥಿರ ಸ್ವತ್ತು ಮಾರಾಟದ ದಿನಾಂಕ: 11.12.2002 ರಂದು ಬಹಿರಂಗ ಹರಾಜಿನಲ್ಲಿಟ್ಟಿದ್ದು ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದಿರುವುದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ವಸೂಲಿ ಅಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು, ಅಧಿಕಾರನಾಮ ಮತ್ತು ಬಾಧ್ಯತೆ ಶ್ರೀ ವೀರಶೈವ ಸಹಕಾರ ಬ್ಯಾಂಕ್ ನಿಯಮಿತ ತುಮಕೂರಿನಲ್ಲಿ ನಿರ್ದಿಷ್ಟವಾಗಿರತಕ್ಕದೆಂದು ಮತ್ತು ಈ ಆದೇಶಕ್ಕೆ ಇಲ್ಲಿ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಂತೆ ಸದರಿ ಅಧಿನಿಯಮ 101 ಬಿ. ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಸ್ವತ್ತಿನ ವಿವರಗಳು**

ತಿಪಟೂರು ಟೌನ್ ವಿ ವಿಭಾಗದ ಕೋಟೆ ಬಡಾವಣೆ, ತಿಪಟೂರು ಮುನ್ಸಿಪಲ್‌ಗೆ ಒಳಪಟ್ಟಿರುವ ಮುನ್ಸಿಪಲ್ ಖಾತೆ ನಂ.440 ಆಗಿದ್ದು ಇದರಲ್ಲಿ ಕಟ್ಟಡ ಸೇರಿ ಒಟ್ಟು ಅಳತೆ ಪೂರ್ವ ಪಶ್ಚಿಮ 22 ಅಡಿಗಳು ಉತ್ತರ ದಕ್ಷಿಣ 37 3/4 ಅಡಿಗಳು ಇದಕ್ಕೆ ಚಕ್ಕು ಬಂದಿ ಪೂರ್ವಕ್ಕೆ ಓಣಿ, ಪಶ್ಚಿಮಕ್ಕೆ ಬೋರಯ್ಯನವರ ಮನೆ, ಉತ್ತರಕ್ಕೆ ರಸ್ತೆ ಮತ್ತು ದಕ್ಷಿಣಕ್ಕೆ ರಸ್ತೆ.

ಪಿ.ಆರ್. 697 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು.

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಇವರ ನಡವಳಿಕೆಗಳು**

**ವಿಷಯ:** ಅಮಲ್ಜಾರಿ ಸಂಖ್ಯೆ: ಸಿಇಪಿ/204/2001-02, ಶ್ರೀ ಡಿ. ರಾಮಯ್ಯ ಬಿನ್ ದೊಡ್ಡಯ್ಯ ಇವರ ಸ್ಥಿರಾಸ್ತಿಯನ್ನು ಹೋಲ್ಡರ್ ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಉಲ್ಲೇಖ:** 1) ಮಾರಾಟಾಧಿಕಾರಿಗಳು ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿ., ತುಮಕೂರು ಇವರ ಪತ್ರ ಸಂಖ್ಯೆ: 1447/03-04, ದಿನಾಂಕ: 21.8.2002 ಮತ್ತು 16.5.2003.

2) ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ವೀರಶೈವ ಸಹಕಾರ ಬ್ಯಾಂಕ್ ನಿ., ತುಮಕೂರು ಇವರ ಪತ್ರ ದಿ:

3) ಈ ಕಛೇರಿಯ ನೋಟೀಸ್ ಸಂಖ್ಯೆ: ಎಆರ್‌ಟಿ ದಾವೆ ಸಂಖ್ಯೆ: 2003-04, ದಿನಾಂಕ: 4.6.2003.

**ಪ್ರಸ್ತಾವನೆ:**

ಶ್ರೀ ಡಿ. ರಾಮಯ್ಯ ಬಿನ್ ದೊಡ್ಡಯ್ಯ ಇವರು ವೀರಶೈವ ಸಹಕಾರ ಬ್ಯಾಂಕ್ ನಿಯಮಿತ, ತುಮಕೂರು ಈ ಬ್ಯಾಂಕಿನಲ್ಲಿ ಸಾಲ ಪಡೆದು ಸುಸ್ತಿಯಾದ ಹಿನ್ನೆಲೆಯಲ್ಲಿ ದಿನಾಂಕ: 4.9.2003 ರಂದು ಡಿಕ್ರಿ ಪಡೆದು ಅಮಲ್ಜಾರಿ ಸಂಖ್ಯೆ: ಸಿಇಪಿ/204/2000-01 ಅಮಲ್ಜಾರಿ ಕ್ರಮ ಜರುಗಿಸಿ ಅಮಲ್ಜಾರಿ ಬಾಕಿ ರೂ.262716/- ಗಳನ್ನು ವಸೂಲಿ ಮಾಡಿಕೊಳ್ಳಲು ಶ್ರೀ ಡಿ. ರಾಮಯ್ಯ ಬಿನ್ ದೊಡ್ಡಯ್ಯ ಇವರ ಸ್ಥಿರಾಸ್ತಿಯನ್ನು ನಿಯಮಾನುಸಾರ ಬಹಿರಂಗ ಹರಾಜು ಮಾಡಲು ದಿನಾಂಕ: 8.12.2001 ರಂದು ನಿಗದಿಪಡಿಸಲಾಗಿತ್ತು. ಸದರಿ ದಿನಾಂಕದಂದು ಬಿಡ್‌ದಾರರು ಯಾರು ಬಾರದಿದ್ದ ಪ್ರಯುಕ್ತ ಬಹಿರಂಗ ಹರಾಜನ್ನು ಮುಂದೂಡಲಾಗಿತ್ತು. ನಂತರ ಅಂತಿಮವಾಗಿ ದಿನಾಂಕ: 12.7.2002 ರಂದು ಮತ್ತೆ ನಿಯಮಾನುಸಾರ ಹರಾಜು ನಿಗದಿಪಡಿಸಿ, ಹರಾಜು ಮಾಡಲಾಗಿ ಸದರಿ ಹರಾಜಿನಲ್ಲಿ ಯಾರು ಬಿಡ್‌ದಾರರು ಭಾಗವಹಿಸದೇ ಇದ್ದ ಪ್ರಯುಕ್ತ ಶ್ರೀ ಡಿ. ರಾಮಯ್ಯ ಬಿನ್ ದೊಡ್ಡಯ್ಯ ಇವರಿಂದ ಬ್ಯಾಂಕಿಗೆ ಬಾಕಿಯಿರುವ ಒಟ್ಟು ರೂ.262716/- ಗಳಿಗೆ ಸದರಿಯವರ ಸ್ಥಿರಾಸ್ತಿಯನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡಲು ಕೋರಿ ಉಲ್ಲೇಖ (1) ರಲ್ಲಿ ಮಾರಾಟಾಧಿಕಾರಿಗಳು ಹಾಗೂ ಉಲ್ಲೇಖ (2) ರಲ್ಲಿ ನಮೂದಿಸಿರುವ ಪತ್ರದಲ್ಲಿ ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಕೋರಿರುತ್ತಾರೆ.

ಶ್ರೀ ಡಿ. ರಾಮಯ್ಯ ಬಿನ್ ದೊಡ್ಡಯ್ಯ ಇವರಿಗೆ ಈ ಬಗ್ಗೆ ಆಕ್ಷೇಪಣೆಗಳನ್ನು ಸಲ್ಲಿಸಲು ಸಾಕಷ್ಟು ಕಾಲಾವಕಾಶ ನೀಡಿ ಉಲ್ಲೇಖ (3) ರಲ್ಲಿ ನಮೂದಿಸಿರುವಂತೆ ನೋಟೀಸ್ ನೀಡಲಾಗಿತ್ತು. ಆದರೆ ಸದರಿಯವರು ಈವರೆವಿಗೂ ಯಾವುದೇ ಆಕ್ಷೇಪಣೆ ಸಲ್ಲಿಸಲು ಹಾಗೂ ಬಾಕಿಯ ಹಣವನ್ನು ಬ್ಯಾಂಕಿಗೆ ಪಾವತಿಸಲು ವಿಫಲರಾಗಿರುತ್ತಾರೆ. ಪ್ರಯುಕ್ತ ಉಲ್ಲೇಖ (1) ಮತ್ತು (2)ರ ಪತ್ರದಲ್ಲಿ ಮಾರಾಟಾಧಿಕಾರಿಗಳು ಮತ್ತು ಬ್ಯಾಂಕಿನ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಯವರ ಕೋರಿಕೆಯಂತೆ ಈ ಕೆಳಕಂಡ ಸ್ಥಿರಾಸ್ತಿಯ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶ ನೀಡಲಾಗಿದೆ.

**ಆದೇಶ ಸಂಖ್ಯೆ: ಎ.ಆರ್.ಟಿ.ಎ.ಬಿ.ಎನ್/ /2003-04, ದಿನಾಂಕ: 31ನೇ ಜನವರಿ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಬಿ. ಜಯಣ್ಣ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು ಉಪವಿಭಾಗ, ತುಮಕೂರು ಆದ ನಾನು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಅನ್ವಯ ರೂಪಿಸಲಾದ ಕರ್ನಾಟಕ ಸಹಕಾರ ಸಂಘಗಳ ನಿಯಮ 38 ರನ್ವಯ ಹಾಗೂ ಕರ್ನಾಟಕ ರಾಜ್ಯ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿನಾಂಕ: 21.11.2001ರ ಪ್ರಕಾರ ಪ್ರತ್ಯೋಜಿಸಲ್ಪಟ್ಟಿರುವ ನನಗೆ ದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಶ್ರೀ ಡಿ. ರಾಮಯ್ಯ ಬಿನ್ ದೊಡ್ಡಯ್ಯ ಇವರ ಸ್ಥಿರಾಸ್ತಿಯನ್ನು ದಿನಾಂಕ: 12.07.2002 ರಂದು ಬಹಿರಂಗ ಹರಾಜಿನಲ್ಲಿ ಬ್ಯಾಂಕಿಗೆ ಬರಬೇಕಾದ ಸಾಲದ ಮೊತ್ತ ರೂ.2,62,716/- (ಎರಡು ಲಕ್ಷ ಅರವತ್ತೆರೆಡು ಸಾವಿರದ ಏಳುನೂರು ಹದಿನಾರು ರೂ.) ಯಾರು ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸದೇ ಇರುವ ಪ್ರಯುಕ್ತ ಶ್ರೀ ಪಿ. ರಾಮಯ್ಯ ಬಿನ್ ದೊಡ್ಡಯ್ಯ ಇವರ ಸ್ಥಿರಾಸ್ತಿ ತುಮಕೂರು ನಗರ, ಸತ್ಯಮಂಗಲದ ಮುನ್ಸಿಫಲ್ ಖಾತೆ ನಂ.272:220:1 ಮೊದಲನೆ ಸತ್ಯಮಂಗಲ ಗ್ರಾಮದ ಸರ್ವೆ ನಂ.184-1 ಮನೆ ನಂ.90-1 ಅಸೆಸ್‌ಮೆಂಟ್ 2201ರ ಅಳತೆ 50X30 ಅಡಿಗಳಾಗಿದ್ದು ಸ್ಥಿರಾಸ್ತಿಯನ್ನು ತುಮಕೂರು ವೀರಶೈವ ಸಹಕಾರ ಬ್ಯಾಂಕ್ ನಿ., ತುಮಕೂರು ಈ ಬ್ಯಾಂಕಿನ ಹೆಸರಿಗೆ ಈ ಕೆಳಕಂಡ ಷರತ್ತು ಮಾಡಿ ವರ್ಗಾವಣೆ ಮಾಡಿ ಸ್ಥಿರೀಕರಣ ಆದೇಶ ನೀಡಿರುತ್ತೇನೆ. ಸಹಕಾರ ಸಂಘಗಳ ಕಾಯ್ದೆಯ ಅನ್ವಯ ನಿಗದಿತ ನಮೂನೆ-VIII ರಂತೆ ಸ್ಥಿರ ಸ್ವತ್ತು ವರ್ಗಾವಣೆ ಪತ್ರವನ್ನು ಅಲಾಯಿದೆ ನೀಡಿರುವುದನ್ನು ಈ ಆದೇಶಕ್ಕೆ ಲಗತ್ತಿಸಿದೆ.

**ಷರತ್ತುಗಳು ಮತ್ತು ನಿಯಮಗಳು**

1. ಬ್ಯಾಂಕಿಗೆ ವರ್ಗಾವಣೆ ಮಾಡಲಾದ ಸ್ಥಿರ ಸ್ವತ್ತನ್ನು ಉಪಯೋಗಿಸತಕ್ಕದ್ದು.
2. ಪುನಃ ಮಾರಾಟ ಮಾಡುವ ಸಂದರ್ಭದಲ್ಲಿ ಸ್ಥಿರಾಸ್ತಿಯ ಅವಿಭಕ್ತ ಕುಟುಂಬದ ಸದಸ್ಯರಿಗೆ ಆದ್ಯತೆ ನೀಡತಕ್ಕದ್ದು.
3. ಈ ಮಾರಾಟದ ವರ್ಗಾವಣೆ ಆದೇಶ ತಲುಪಿದ ಒಂದು ವಾರದೊಳಗಾಗಿ ಮಾರಾಟದ ಹಣವನ್ನು ಬ್ಯಾಂಕಿಗೆ ಜಮಾ - ಖರ್ಚು ಮಾಡಿಕೊಡತಕ್ಕದ್ದು.

ಈ ಕಛೇರಿಯ ಮುದ್ರೆ ಮತ್ತು ನನ್ನ ಸಹಿಯೊಂದಿಗೆ ದಿನಾಂಕ: 31.1.2004 ರಂದು ಆದೇಶ ನೀಡಿರುತ್ತೇನೆ.

ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು.

**ನಮೂನೆ VIII**

**(ಸಹಕಾರ ಸಂಘಗಳ ನಿಯಮ 1960ರ ಅನುಬಂಧ 38 (ಎ) )**

**ಸಹಕಾರ ಸಂಘಗಳ ಕಾಯಿದೆ 1959ರ ಕಲಂ 101ರ ಅನ್ವಯ ಪರ ಬಾಕಿ ಬಗ್ಗೆ.**

**ಪ್ರಮಾಣ ಪತ್ರ**

ಶ್ರೀ ವೀರಶೈವ ಸಹಕಾರ ಬ್ಯಾಂಕ್ ನಿಯಮಿತ, ತುಮಕೂರು ಇವರ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಇವರು ಕರ್ನಾಟಕ ಸಹಕಾರ ಸಂಘಗಳ ಕಾಯಿದೆ 1959ರ ಕಲಂ 71ರ ಅನ್ವಯ ಆದೇಶವನ್ನು ಜಾರಿ ಮಾಡಿರುವುದರಿಂದ ಶ್ರೀ ಡಿ. ರಾಮಯ್ಯ ಬಿನ್ ಲೇಟ್ ದೊಡ್ಡಯ್ಯ, ತುಮಕೂರು ಇವರ ಸ್ಥಿರ ಸ್ವತ್ತು ಮಾರಾಟದ ದಿನಾಂಕ: 12.7.2002 ರಂದು ಬಹಿರಂಗ ಹರಾಜಿನಲ್ಲಿಟ್ಟಿದ್ದು ಹರಾಜಿನಲ್ಲಿ ಕೊಂಡುಕೊಳ್ಳುವವರು ಇಲ್ಲದಿರುವುದರಿಂದ ಸದರಿ ಸ್ವತ್ತನ್ನು ಮಾರಾಟ ಮಾಡಲಾಗಲಿಲ್ಲ ಎಂಬುದಾಗಿ ವಸೂಲಿ ಅಧಿಕಾರಿಯಾದ ನಾನು ಸಮಾಧಾನ ಹೊಂದುತ್ತೇನೆ.

ಸದರಿ ಸ್ವತ್ತಿನಲ್ಲಿ ಡಿಕ್ರಿ ಬಾಕಿದಾರನ ಹಕ್ಕು, ಅಧಿಕಾರನಾಮ ಮತ್ತು ಬಾಧ್ಯತೆ ಶ್ರೀ ವೀರಶೈವ ಸಹಕಾರ ಬ್ಯಾಂಕ್ ನಿಯಮಿತ ತುಮಕೂರಿನಲ್ಲಿ ನಿರ್ದಿಷ್ಟವಾಗಿರತಕ್ಕದೆಂದು ಮತ್ತು ಈ ಆದೇಶಕ್ಕೆ ಇಲ್ಲಿ ಸೇರಿಸಲ್ಪಟ್ಟ ಅಧಿಸೂಚನೆಯಲ್ಲಿ ವಿಧಿಸಲಾದ ಷರತ್ತುಗಳಂತೆ ಸದರಿ ಅಧಿನಿಯಮ 101 ಬಿ. ಪ್ರಕರಣದನ್ವಯ ಈ ಮೂಲಕ ಆದೇಶ ನೀಡಲಾಗಿದೆ.

**ಸ್ವತ್ತಿನ ವಿವರಗಳು**

ತುಮಕೂರು ನಗರದ ಸತ್ಯಮಂಗಲದ ಮುನ್ಸಿಪಲ್ ಖಾತೆ ನಂ.272:220-1 ಮೊದಲಿಗೆ ಸತ್ಯಮಂಗಲ ಗ್ರಾಮದ ಸರ್ವೆ ನಂ.184-1 ಮನೆ. ನಂ. ಅಸೆಸ್‌ಮೆಂಟ್ 220-1 ಅಳತೆ 50X30 ಅಡಿಗಳಾಗಿದ್ದು ಚಕ್ಕುಬಂದಿ ಪೂರ್ವಕ್ಕೆ ಕೆ.ಆರ್.ಸಿ. ಬೋರ್‌ವೆಲ್ ಸ್ವತ್ತು, ಪಶ್ಚಿಮಕ್ಕೆ ನರಸಿಂಹಯ್ಯನವರ ಸ್ವತ್ತು ಉತ್ತರಕ್ಕೆ ರಸ್ತೆ ಮತ್ತು ಕನ್ಸರ್‌ವೆನ್ಸಿ, ದಕ್ಷಿಣಕ್ಕೆ ಲಕ್ಷ್ಮೀನರಸಿಂಹಯ್ಯನವರ ಸ್ವತ್ತು.

ಪಿ.ಆರ್. 698 ಸಹಕಾರ ಸಂಘಗಳ ಸಹಾಯಕ ನಿಬಂಧಕರು, ತುಮಕೂರು.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಚಾಮರಾಜಪೇಟೆ, ಬೆಂಗಳೂರು-18 ಇವರ ನಡವಳಿಕೆಗಳು**

**ಕ್ರಮ ಸಂಖ್ಯೆ: ಎಆರ್‌ಬಿ 45/ದಾವಾ/ಮಾ.ಸ್ಥಿ/25/2004-05, ದಿನಾಂಕ: 23ನೇ ಏಪ್ರಿಲ್ 2004**

**ವಿಷಯ:** ಶ್ರೀ ಆರ್. ಲೋಕನಾಥ್ ಬಿನ್ ಲೇಟ್ ಎಂ. ರಾಮಾನುಜಪ್ಪ, ನಂ.177, 3ನೇ ಘಟ್ಟ, 4ನೇ ಬ್ಲಾಕ್, ಪಶ್ಚಿಮ ಕಾರ್ಡ್ ರಸ್ತೆ, ಬಸವೇಶ್ವರನಗರ, ಬೆಂಗಳೂರು-560 079, ಇವರ ಸ್ಥಿರ ಸ್ವತ್ತನ್ನು ದಿನಾಂಕ: 26.02.2004 ರಂದು ನಡೆದ ಬಹಿರಂಗ ಹರಾಜಿನಲ್ಲಿ ಶ್ರೀ ಕೆ. ಉಮಾಶಂಕರ್ ಬಿನ್ ಲೇಟ್ ಕೆಂಪಣ್ಣ ನವರು ಖರೀದಿಸಿದ ಬಗ್ಗೆ ಮಾರಾಟವನ್ನು ಸ್ಥಿರೀಕರಿಸುವ ಬಗ್ಗೆ.

**ಉಲ್ಲೇಖ:**
1) ಅವಾರ್ಡ್ ನಂ. ಜೆಆರ್‌ಬಿ/ಡಿಐಎಸ್/2317/01-02.
2) ಜೆಆರ್‌ಬಿ/ಎಂ.ಡಿ./5871/5872/03-04, ದಿನಾಂಕ: 31.12.2003.
3) ಅಮಲ್ಜಾರಿ ಅರ್ಜಿ ಸಂಖ್ಯೆ: ಎಆರ್‌ಬಿ-II (45) ಸಿಇಪಿ/3451/2003-04.
4) ಸಹಕಾರ ಅಭಿವೃದ್ಧಿ ಅಧಿಕಾರಿ ಹಾಗೂ ಮಾರಾಟಾಧಿಕಾರಿ, ನಿಯಮ 441 ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ರವರ ವರದಿ ದಿನಾಂಕ: 10.04.2004.

**ಪ್ರಸ್ತಾವನೆ:**

ಶ್ರೀ ಆರ್. ಲೋಕನಾಥ್ ಬಿನ್ ಲೇಟ್ ಎಂ. ರಾಮಾನುಜಪ್ಪ, ನಂ.177, 3ನೇ ಘಟ್ಟ, 4ನೇ ಬ್ಲಾಕ್ ಬಸವೇಶ್ವರನಗರ, ಬೆಂಗಳೂರು-560 079, ಇವರು ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ವಿ.ವಿ. ಪುರಂ, ಬೆಂಗಳೂರು-560 004 ಈ ಬ್ಯಾಂಕಿನ ಸದಸ್ಯರಾಗಿದ್ದು, ಯಂತ್ರೋಪಕರಣಗಳ ಖರೀದಿಗಾಗಿ ದಿನಾಂಕ: 20.05.1998 ರಂದು ರೂ.14,15,000-00 ಗಳನ್ನು ಸಾಲವಾಗಿ ಪಡೆದು, ಸದರಿ ಸಾಲಕ್ಕೆ ಶ್ರೀ ಆರ್. ಲೋಕನಾಥ್ ರವರಿಗೆ ಸೇರಿದ ಆಸ್ತಿ ನಂ.177, 3ನೇ ಘಟ್ಟ, 4ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು-560079, ವಿಸ್ತೀರ್ಣ ಪೂರ್ವ-ಪಶ್ಚಿಮ 40 ಅಡಿಗಳು, ಉತ್ತರ-ದಕ್ಷಿಣ 30 ಅಡಿಗಳು ಅಳತೆಯುಳ್ಳ ನಿವೇಶನವನ್ನು ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕಿಗೆ ಆಧಾರ ಮಾಡಿ ಬೆಂಗಳೂರು ನಗರದ ರಾಜಾಜಿನಗರ ಉಪನೋಂದಣಾಧಿಕಾರಿಯವರ ಕಛೇರಿಯಲ್ಲಿ ಕ್ರ.ಸಂ.466/98-99, ದಿನಾಂಕ: 12.05.1998 ರಂದು ಡೆಪಾಸಿಟ್ ಆಫ್ ಟೈಟಲ್ ಡೀಡ್‌ನ್ನು ಮಾಡಿಕೊಟ್ಟಿರುತ್ತಾರೆ. ಬ್ಯಾಂಕಿನ ಸಾಲ ಮಂಜೂರಾತಿಯ ಷರತ್ತು ಮತ್ತು ನಿಬಂಧನೆಗಳ ಪ್ರಕಾರ ಸಾಲಗಾರರಾದ ಶ್ರೀ ಆರ್. ಲೋಕನಾಥ್ ಬಿನ್ ರಾಮಾನುಜಪ್ಪ ಎಂಬುವವರು ಬ್ಯಾಂಕಿನ ಸಾಲದ ಹಣವನ್ನು ಮರುಪಾವತಿಸದ ಪ್ರಯುಕ್ತ ಪ್ರಧಾನ ವ್ಯವಸ್ಥಾಪಕರು, ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ರವರು ಉಲ್ಲೇಖ (1) ರಲ್ಲಿ ನಮೂದಿಸಿರುವ ಆದೇಶಗಳ ಮೂಲಕ ಡಿಕ್ರಿಯನ್ನು ಪಡೆದು ಉಲ್ಲೇಖ (2) ರಲ್ಲಿ ನಮೂದಿಸಿರುವ ಈ ಕಛೇರಿಯ ಹುಕುಂ ಅನ್ವಯ ಅಮಲ್ಜಾರಿ ಆಗಿರುತ್ತದೆ. ಸದರಿ ಆದೇಶಗಳ ಮೇರೆಗೆ ಸಹಕಾರ ಅಭಿವೃದ್ಧಿ ಅಧಿಕಾರಿ ಹಾಗೂ ಮಾರಾಟಾಧಿಕಾರಿ, ನಿಯಮ 441, ಶ್ರೀ ಸುಬ್ರಮಣ್ಯೇಶ್ವರ ಕೋ-ಆಪರೇಟಿವ್ ಬ್ಯಾಂಕ್ ಲಿ., ಬೆಂಗಳೂರು ರವರು ಶ್ರೀ ಆರ್. ಲೋಕನಾಥ್ ಬಿನ್ ಲೇಟ್ ಎಂ. ರಾಮಾನುಜಪ್ಪ ಎಂಬುವವರು ಬ್ಯಾಂಕಿಗೆ ಆಧಾರ ಮಾಡಿರುವ ಸ್ಥಿರ ಸ್ವತ್ತನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 89 ಮತ್ತು ನಿಯಮಗಳ 1960 ನಿಯಮ 38 ರನ್ವಯ ದಿನಾಂಕ: 26.02.2004 ರಂದು ಬಹಿರಂಗ ಹರಾಜು ಮೂಲಕ ಶ್ರೀ ಕೆ. ಉಮಾಶಂಕರ್ ಬಿನ್ ಲೇಟ್ ಕೆಂಪಣ್ಣ, ನಂ.170, 1ನೇ 'ಜಿ' ಕ್ರಾಸ್, ಶಾರದ ಕಾಲೋನಿ, ಬಸವೇಶ್ವರನಗರ, ಬೆಂಗಳೂರು-79 ಇವರಿಗೆ ರೂ.20,10,000-00 ಗಳಿಗೆ (ಇಪ್ಪತ್ತು ಲಕ್ಷ ಹತ್ತು ಸಾವಿರ ರೂಪಾಯಿಗಳು ಮಾತ್ರ)

ಮಾರಾಟ ಮಾಡಿರುತ್ತಾರೆ. ಮಾರಾಟದ ಹಣವು ಮೌಲ್ಯಮಾಪಕರು ಆಸ್ತಿಯ ಬೆಲೆಯನ್ನು ನಿಗದಿಪಡಿಸಿರುವ ಬೆಲೆಗಿಂತ ಹೆಚ್ಚಾಗಿರುತ್ತದೆ. ಆಸ್ತಿಯನ್ನು ಖರೀದಿಸಿದ ಶ್ರೀ ಕೆ. ಉಮಾಶಂಕರ್ ರವರು ಹರಾಜಿನ ಪೂರ್ಣ ಹಣವನ್ನು ನಿಗದಿತ ಅವಧಿಯೊಳಗೆ ಬ್ಯಾಂಕಿಗೆ ಜಮಾ ಮಾಡಿರುವುದಾಗಿ ಮಾರಾಟಾಧಿಕಾರಿಯವರು ಉಲ್ಲೇಖ (3) ರಂತೆ ಈ ಕಛೇರಿಗೆ ವರದಿ ಮಾಡಿ ಸ್ಥಿರಸ್ವತ್ತು ಖರೀದಿದಾರರಾದ ಶ್ರೀ ಕೆ. ಉಮಾಶಂಕರ್‌ರವರ ಹೆಸರಿಗೆ ಮಾರಾಟ ದೃಢೀಕರಣ ಮಾಡಿ ಪ್ರಮಾಣ ಪತ್ರ ನೀಡುವಂತೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಸದರೀ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಎಂ.ಡಿ. ನರಸಿಂಹಮೂರ್ತಿ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು ಆದ ನಾನು ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ: ಸಿಎಂಡಬ್ಲ್ಯೂ 69 ಸಿಎಲ್‌ಎಂ 2001, ದಿನಾಂಕ: 21.11.2001 ರನ್ವಯ ಪ್ರತ್ಯಾಯೋಜನೆಯಾದ ಹಾಗೂ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 89ಎ ಅನ್ವಯ ದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ ಶ್ರೀ ಆರ್. ಲೋಕನಾಥ್, ನಂ.177, 3ನೇ ಘಟ್ಟ, 4ನೇ ಬ್ಲಾಕ್, ಬಸವೇಶ್ವರನಗರ, ಬೆಂಗಳೂರು-79 ವಿಸ್ತೀರ್ಣ ಪೂರ್ವ-ಪಶ್ಚಿಮ 40 ಅಡಿಗಳು, ಉತ್ತರ-ದಕ್ಷಿಣ 30 ಅಡಿಗಳು, ಪೂರ್ವಕ್ಕೆ ರಸ್ತೆ, ಪಶ್ಚಿಮಕ್ಕೆ 216ನೇ ನಂಬರಿನ ನಿವೇಶನ, ಉತ್ತರಕ್ಕೆ 176ನೇ ನಂಬರಿನ ನಿವೇಶನ, ದಕ್ಷಿಣಕ್ಕೆ 178ನೇ ನಂಬರಿನ ಮಧ್ಯೆ ಇರುವ 177ನೇ ನಿವೇಶನ ಆಸ್ತಿಯನ್ನು ಮಾರಾಟಾಧಿಕಾರಿಯವರು ದಿನಾಂಕ: 26.02.2004 ರಂದು ನಡೆಸಿದ ಬಹಿರಂಗ ಹರಾಜಿನಲ್ಲಿ ಶ್ರೀ ಕೆ. ಉಮಾಶಂಕರ್ ವರಿಗೆ ರೂ.20,10,000-00 ಗಳಿಗೆ (ಇಪ್ಪತ್ತು ಲಕ್ಷ ಹತ್ತು ಸಾವಿರಗಳು ಮಾತ್ರ) ಮಾರಾಟ ಮಾಡಿದ್ದು, ಶ್ರೀ ಕೆ. ಉಮಾಶಂಕರ್ ರವರು ಮಾರಾಟಾದ ಪೂರ್ಣ ಹಣವನ್ನು ನಿಗದಿತ ಅವಧಿಯೊಳಗೆ ಡಿಕ್ರಿದಾರ ಬ್ಯಾಂಕಿಗೆ ಪಾವತಿಸಿರುವ ಪ್ರಯುಕ್ತ ಮಾರಾಟಾಧಿಕಾರಿಯವರು ದಿನಾಂಕ: 26.02.2004 ರಂದು ಬಹಿರಂಗ ಹರಾಜು ಮೂಲಕ ಮಾರಾಟ ಮಾಡಿರುವ ಸ್ವತ್ತನ್ನು ಶ್ರೀ ಕೆ. ಉಮಾಶಂಕರ್ ಬಿನ್ ಲೇಟ್ ಕೆಂಪಣ್ಣರವರ ಹೆಸರಿಗೆ ಮಾರಾಟವನ್ನು ದೃಢೀಕರಿಸಿ ಖಾಯಂಗೊಳಿಸಲಾಗಿದೆ.

ಈ ಆದೇಶವನ್ನು ನನ್ನ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ: 23.04.2004 ರಂದು ಹೊರಡಿಸಲಾಗಿದೆ.

ಪಿ.ಆರ್. 699 ಸಹಕಾರ ಸಂಘಗಳ ಸಹಾಯಕ ನಿಬಂಧಕರು, 2ನೇ ವಲಯ, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಬಿ3.ಅಮೊ.ವಾಹನ.34/2003-04**

**ಉಪಸ್ಥಿತರು:** ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ, ಸಾಗರ ವಲಯ.

**ಆರೋಪಿಗಳು:** ಪತ್ತೆಯಾಗಿರುವುದಿಲ್ಲ.

**ಬಾಧ್ಯತೆದಾರರು:** 1) ಯಾರು ನ್ಯಾಯಾಲಯಕ್ಕೆ ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ: 04.03.2004 ರಂದು ವಲಯ ಅರಣ್ಯಾಧಿಕಾರಿ, ಸಾಗರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ (ಗೆಣಸಿನಕುಣಿ ಕಡೆಯಿಂದ ಆವಿನಹಳ್ಳಿ ಮಾರ್ಗವಾಗಿ ಸಾಗರಕ್ಕೆ ಶ್ರೀಗಂಧವನ್ನು ಮಾರುತಿ 800 ಕಾರಿನಲ್ಲಿ ಸಾಗಾಣಿಕೆ ಮಾಡುತ್ತಾರೆಂದು) ಸಾಗರ ತಾಲ್ಲೂಕು ಆವಿನಹಳ್ಳಿ ಹೋಬಳಿ ಮತ್ತು ಗ್ರಾಮದ ಅರಣ್ಯ ರಕ್ಷಕರ ವಸತಿಗೃಹದ ಹತ್ತಿರ ಕಾಯುತ್ತಿರುವಾಗ ರಾತ್ರಿ ಸುಮಾರು 8.30ರ ಸಮಯದಲ್ಲಿ ಒಂದು ವಾಹನ ಗೆಣಸಿನಕುಣಿ ಕಡೆಯಿಂದ ಸಾಗರಕ್ಕೆ ಬರುತ್ತಿರುವುದನ್ನು ತಡೆದು ನಿಲ್ಲಿಸಲು ಸೂಚಿಸಿದಾಗ ಇಲಾಖೆಯವರನ್ನು ಕಂಡು ಸುಮಾರು 25 ಮೀಟರ್ ದೂರದಲ್ಲಿ ಕಾರನ್ನು ನಿಲ್ಲಿಸಿ ಅದರಲ್ಲಿದ್ದ ಅಸಾಮಿಗಳು ಕತ್ತಲೆಯಲ್ಲಿ ಓಡಿ ಪರಾರಿಯಾಗಿರುತ್ತಾರೆ, ಯಾರೆಂದು ಕಂಡು ಬಂದಿರುವುದಿಲ್ಲ. ನಂತರ ವಾಹನ ಮಾರುತಿ 800 ನಂ. ಕೆಎ-01-ಪಿ-2705 ಆಗಿದ್ದು, ಈ ವಾಹನದ ಡಿಕ್ಕಿ ತೆಗೆದು ನೋಡಲಾಗಿ ವಿಶೇಷ ಮಾದರಿಯ ವ್ಯವಸ್ಥೆ ಮಾಡಿದ್ದು, ಅದರೊಳಗಡೆ ಶ್ರೀಗಂಧದ ಚಕ್ಕೆ 24.5 ಕೆ.ಜಿ. ಇದ್ದು, ಶ್ರೀಗಂಧದ ಚಕ್ಕೆ ಸಾಗಿಸಲು ಅನುಮತಿ ಇಲ್ಲದ ಕಾರಣ, ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ರಾತ್ರಿ ಸಾರ್ವಜನಿಕರು ಯಾರು ಇಲ್ಲದ ಕಾರಣ ಇಲಾಖೆಯವರೇ ಪಂಚರನ್ನಾಗಿ ನೇಮಿಸಿ, ಈ ವಾಹನ ಮತ್ತು ಶ್ರೀಗಂಧದ ಚಕ್ಕೆಯನ್ನು ಇಲಾಖಾ ಪರ ವಶಪಡಿಸಿಕೊಂಡು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 62, 71(ಎ) 87 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಕಲಂ 144, 165ರ ಪ್ರಕಾರ ಅ.ಮೊ.ಸಂಖ್ಯೆ: 143/2003-04 ದಾಖಲಿಸಿ ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿನಾಂಕ: 15.03.2004 ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿನಾಂಕ: 24.03.2004 ರಂದು **ಮನೊಭೋಮಿ** ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ

ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಸಾಗರ ಇವರು ಜಪ್ತು ಮಾಡಿದ ವಾಹನ ಮಾರುತಿ 800 ನಂ.ಕೆಎ-01-ಪಿ-2705 ಛಾಸ್ಸಿ ನಂ.234932, ಇಂಜಿನ್ ನಂ.819660 ಮತ್ತು ಶ್ರೀಗಂಧದ ಚಕ್ಕೆ 24.5 ಕೆ.ಜಿ. ಇದ್ದು, ಇದು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ: 04.05.2004 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 700

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಬಿ3.ಅಮೊ.ವಾಹನ.33/2003-04**

**ಉಪಸ್ಥಿತರು:** ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.
**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ.
**ಆರೋಪಿಗಳು:** 1) ರಂಗನಾಥ 2) ಸ್ವಾಮಿಕಣ್ಣನ್
**ಬಾಧ್ಯತೆದಾರರು:** 1) ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ: 03.03.2004 ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾಲ್ಲೂಕು ಅಂಜಾನಪುರ ಹೋಬಳಿ ಮತ್ತು ಗ್ರಾಮದ ಬಳಿ ಹೊನ್ನೆ ಮರದ ಚೌಡಪ್ಪ ದೇವಸ್ಥಾನದ ಹತ್ತಿರ ಬೆಳಿಗ್ಗೆನ ಜಾವ ಸುಮಾರು 5.00 ಗಂಟೆ ಸಮಯದಲ್ಲಿ ಕಾಯುತ್ತಿರುವಾಗ 2 ದ್ವಿಚಕ್ರ ವಾಹನಗಳು ಬರುತ್ತಿರುವುದನ್ನು ಕಂಡು ಬ್ಯಾಟರಿ ಬೆಳಕಿನಿಂದ ನಿಲ್ಲಿಸಲು ಸೂಚಿಸಿದಾಗ ಅಸಾಮಿಗಳು ನಿಲ್ಲಿಸದೇ ವೇಗವಾಗಿ ಓಡಿಸಿದಾಗ ಕೊರಕಲು ರಸ್ತೆಯಾದ್ದರಿಂದ ವಾಹನಗಳೆರಡು ಬಿದ್ದವು. ಒಬ್ಬ ಅಸಾಮಿಯನ್ನು ಹಿಡಿಯಲಾಯಿತು. ಮತ್ತೊಬ್ಬ ಅಸಾಮಿ ಕತ್ತಲಲ್ಲಿ ಓಡಿ ಪರಾರಿಯಾದನು. ವಾಹನದ ಬಳಿ ಬಂದು ನೋಡಲಾಗಿ ಒಂದು ಸುಜುಕಿ ಮ್ಯಾಕ್ಸ್ 100 ನಂ.ಕೆಎ-15-ಇ-5187, ಮತ್ತೊಂದು ಬಜಾಜ್ ಸ್ಕೂಟರ್ ಕೆಎ-19-ಇ-3983 ಆಗಿದ್ದು, ಮೊದಲನೆ ವಾಹನದಲ್ಲಿ 3 ಶ್ರೀಗಂಧದ ತುಂಡುಗಳು ಮತ್ತು 2ನೇ ವಾಹನದಲ್ಲಿ 2 ಶ್ರೀಗಂಧದ ತುಂಡುಗಳು ಒಟ್ಟು ತೂಕ 25 ಕೆ.ಜಿ. ಇದ್ದು, ಅವುಗಳ ಮೇಲೆ ಯಾವುದೇ ಇಲಾಖಾ ಛಾಪವಾಗಲೀ ಸಾಗಿಸಲು ರಹದಾರಿಯಾಗಲೀ ಇಲ್ಲವೆಂದು ಅಸಾಮಿ ಹೇಳಿದನು. ಒಂದು ತಕ್ಕಡಿ, 2 ಕೆ.ಜಿ.ಯ ಒಂದು ಕಲ್ಲು, ಒಂದು ಕೆ.ಜಿ.ಯ ಒಂದು ಕಲ್ಲು ಇದ್ದು, ಇದರ ಸಹಾಯದಿಂದ ತೂಕ ಮಾಡಿದೆಂದು ಅಸಾಮಿ ತಿಳಿಸಿರುತ್ತಾನೆ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ 2 ವಾಹನ ಮತ್ತು ಶ್ರೀಗಂಧದ ತುಂಡುಗಳು, ತಕ್ಕಡಿ, ಕಲ್ಲು ಮತ್ತು ಅಸಾಮಿಯನ್ನು ಇಲಾಖಾ ಪರ ವಶಪಡಿಸಿಕೊಂಡು ಸಾರ್ವಜನಿಕರು ಯಾರು ಇಲ್ಲವಾದ್ದರಿಂದ ಇಲಾಖಾ ಸಿಬ್ಬಂದಿಯವರನ್ನೇ ಪಂಚರನ್ನಾಗಿ ನೇಮಿಸಿ ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) 24, 84, 86, 87 ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಕಲಂ 144, 165ರ ಪ್ರಕಾರ ಅ.ಮೊ. ಸಂಖ್ಯೆ: 117/2003-04 ದಾಖಲಿಸಿ ನಂತರ ಆರೋಪಿಯನ್ನು ಜೆಎಂಎಫ್‌ಸಿ ನ್ಯಾಯಾಲಯ ಶಿಕಾರಿಪುರಕ್ಕೆ ಒಪ್ಪಿಸಿ ಮತ್ತು ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿನಾಂಕ: 15.03.2004 ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿನಾಂಕ: 24.03.2004 ರಂದು **ಮನೋಭೂಮಿ** ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರೂ ಸಹ ವಾಹನದ ಮಾಲೀಕರು, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಸುಜುಕಿ ಮ್ಯಾಕ್ಸ್ 100 ನಂ.ಕೆಎ-15-ಇ-5187, ಛಾಸ್ಸಿ ನಂ.1512 ಎಫ್ 583564, ಇಂಜಿನ್ ನಂ.1512ಎಂ627673 ಮತ್ತು 3 ಶ್ರೀಗಂಧದ ತುಂಡುಗಳು, ಮತ್ತೊಂದು ಬಜಾಜ್ ಸ್ಕೂಟರ್ ಕೆಎ-19-ಇ-3983, ಛಾಸ್ಸಿ ನಂ:ಎಫ್0ಬಿಸಿಸಿ 089493, ಇಂಜಿನ್ ನಂ: ಎಂ0ಬಿ-ಸಿಬಿ-092390 ಮತ್ತು 2 ಶ್ರೀಗಂಧದ ತುಂಡುಗಳು ಒಟ್ಟು ತೂಕ 25 ಕೆ.ಜಿ. ಇದ್ದು, ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ತಕ್ಕಡಿ ಕಲ್ಲನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ: 04.05.2004 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 701

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ**
**ಸಂಖ್ಯೆ: ಬಿ3.ಅಮೊ.ವಾಹನ.32/2003-04**

**ಉಪಸ್ಥಿತರು:** ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.
**ಫಿರ್ಯಾದುದಾರರು:** ವಲಯ ಅರಣ್ಯಾಧಿಕಾರಿ, ಶಿಕಾರಿಪುರ ವಲಯ.
**ಆರೋಪಿಗಳು:** 1) ನಾರಾಯಣಪ್ಪ 2) ಧಾನಪ್ಪ
**ಬಾಧ್ಯತೆದಾರರು:** 1) ಯಾರು ಬಂದಿರುವುದಿಲ್ಲ.

**ಪ್ರಸ್ತಾವನೆ:**

ದಿನಾಂಕ: 18.02.2004 ರಂದು ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಮತ್ತು ಸಿಬ್ಬಂದಿಯವರಿಗೆ ಬಂದ ಖಚಿತ ವರ್ತಮಾನದ ಮೇರೆಗೆ ಶಿಕಾರಿಪುರ ತಾಲ್ಲೂಕು ಹೊಸೂರು ಹೋಬಳಿ ಕೆಂಗಟ್ಟೆ ಕ್ರಾಸ್ ಬಳಿ ರಾತ್ರಿ ಗಸ್ತನ್ನು ಮಾಡುತ್ತಿರುವಾಗ ಒಂದು ದ್ವಿಚಕ್ರ ವಾಹನವು ಶಿಕಾರಿಪುರ ಕಡೆಯಿಂದ ಬರುತ್ತಿರುವುದನ್ನು ನಿಲ್ಲಿಸಲು ಸೂಚಿಸಿದಾಗ ನಿಲ್ಲಿಸದೇ ವೇಗವಾಗಿ ಓಡಿದಾಗ ಇಲಾಖಾ ವಾಹನದಿಂದ ಬೆನ್ನಟ್ಟಿ ಬಾಳೆಕೊಪ್ಪದ ಬಳಿ ತಡೆದು ನಿಲ್ಲಿಸಲಾಗಿ ಈ ವಾಹನವು ಹೀರೋಹೊಂಡಾ ಪ್ಯಾಶನ್ ಕೆಎ-17-ಕ್ಯೂ-8704 ಆಗಿದ್ದು, ಈ ವಾಹನದಲ್ಲಿ ಇಬ್ಬರು ಅಸಾಮಿಗಳಿದ್ದು, ಅಸಾಮಿಗಳನ್ನು ಹಿಡಿದು ವಿಚಾರಿಸಲಾಗಿ ಈ ವಾಹನದಲ್ಲಿದ್ದ 12 ಬೀಟೆ ಸೈಜುಗಳು, ಅವುಗಳನ್ನು ಪ್ಲೇನಿಂಗ್ ಮಾಡಿದ್ದು, ಸೋಪಾಸೆಟ್ಟಿನ ಹ್ಯಾಂಡಲ್‌ಗಳಾಗಿರುವುದು ಕಂಡು ಬಂದಿತು. ಅವುಗಳ ಮೇಲೆ ಯಾವುದೇ ಇಲಾಖಾ ಚಾಪಾವಾಗಲೀ ಸಾಗಿಸಲು ರಹದಾರಿಯಾಗಲೀ ಇಲ್ಲವೆಂದು ಅಸಾಮಿಗಳು ಹೇಳಿದ ಮೇರೆಗೆ ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ ವಾಹನ, ಬೀಟೆ ಸೈಜು, ಅಸಾಮಿಗಳನ್ನು ಇಲಾಖಾ ಪರ ವಶಪಡಿಸಿಕೊಂಡು ಮಹಜರ್ ಕ್ರಮ ಜರುಗಿಸಿ ಕರ್ನಾಟಕ ಅರಣ್ಯ ಕಾಯಿದೆ 1963 ಕಲಂ 71(ಎ) 104ಎ, 50ಕೆ ಮತ್ತು ಕರ್ನಾಟಕ ಅರಣ್ಯ ಕಾನೂನು 1969 ಕಲಂ 144, 165ರ ಪ್ರಕಾರ ಅ.ಮೊ. ಸಂಖ್ಯೆ: 105/2003-04 ದಾಖಲಿಸಿ ನಂತರ ಆರೋಪಿಯನ್ನು ಜೆಎಂಎಫ್‌ಸಿ ನ್ಯಾಯಾಲಯ ಶಿಕಾರಿಪುರಕ್ಕೆ ಒಪ್ಪಿಸಿ ಮತ್ತು ವಾಹನವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸುರಕ್ಷತೆಗಾಗಿ ವಲಯ ಅರಣ್ಯಾಧಿಕಾರಿ, ಸಾಗರ ಇವರ ಸುಪರ್ಧಿಗೆ ಕೊಟ್ಟಿದೆ.

ನಂತರ ಈ ವಾಹನದ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ ದಿನಾಂಕ: 15.03.2004 ರಂದು 30 (ಮೂವತ್ತು) ದಿನಗಳ ಕಾಲಾವಕಾಶ ನೀಡಿ ಪ್ರಕಟಣೆ ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಸರ್ಕಾರಿ ಮುದ್ರಣಾಲಯ ಬೆಂಗಳೂರು ಮತ್ತು ನಿರ್ದೇಶಕರು ವಾರ್ತಾ ಮತ್ತು ಪ್ರಚಾರ ಇಲಾಖೆ ಬೆಂಗಳೂರು ಇವರಿಗೆ ಕಳುಹಿಸಿ ಪತ್ರಿಕೆಯಲ್ಲಿ ಪ್ರಕಟಿಸಿ ಪ್ರತಿಯನ್ನು ಕಳುಹಿಸಲು ಕೋರಲಾಯಿತು. ಈ ಪ್ರಕಟಣೆಯ ದಿನಾಂಕ: 24.03.2004 ರಂದು **ಮನೊಭೋಮಿ** ದಿನ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ವಾಹನದ ಬಗ್ಗೆ ಕ್ಲೈಮ್ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿರುವುದಿಲ್ಲ. ಇದರಿಂದ ಈ ವಾಹನವು ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿಸಿರುವುದು ಸ್ಪಷ್ಟವಾಗಿರುತ್ತದೆ. ಈ ಪ್ರಕರಣದಲ್ಲಿ ಸಾಕಷ್ಟು ಕಾಲಾವಕಾಶವನ್ನು ನೀಡಿದರು ಸಹ ವಾಹನದ ಮಾಲೀಕರು, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ ವಾಹನ ಮಾಲೀಕತ್ವದ ಬಗ್ಗೆ ಮೂಲ ದಾಖಲಾತಿಗಳನ್ನು ಹಾಜರ್ಪಡಿಸಿ ತಾವು ತಪ್ಪಿತಸ್ಥರಲ್ಲ ಎಂಬುದನ್ನು ಸಾಬೀತು ಪಡಿಸಲು ವಿಫಲರಾಗಿರುವ ಕಾರಣ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಶಿಕಾರಿಪುರ ಇವರು ಜಪ್ತು ಮಾಡಿದ ವಾಹನ ಹೀರೋಹೊಂಡಾ ಪ್ಯಾಶನ್ ಕೆಎ-17-ಕ್ಯೂ-8704, ಛಾಸ್ಸಿ ನಂ.02ಸಿ21ಸಿ30835, ಇಂಜಿನ್ ನಂ.

ಕಾಣಿಸಿರುವುದಿಲ್ಲ. ಮತ್ತು ಬೀಟೆ ಸೈಜು ಸೋಫಾಹ್ಯಾಂಡಲ್ 12=0.024ಎಂ3 ಇದ್ದು, ಇದು ಕರ್ನಾಟಕ ಸರ್ಕಾರದ ಸಂಪತ್ತು ಆಗಿರುವುದರಿಂದ ಅಂತಿಮವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಬೀಟೆ ಸೈಜುಗಳನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ: 04.05.2004 ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ. ಈ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಈ ನ್ಯಾಯಾಲಯಕ್ಕೆ ಕ್ಲೇಮು ಅರ್ಜಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

ಪಿ.ಆರ್. 702

**ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ, ಮೈಸೂರು-1**

**ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿಗಳು, ನಿಯಮ 441, ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ, ಮೈಸೂರು, ಇವರ ನಡವಳಿಕೆಗಳು**

**ವಿಷಯ:** ಸುಸ್ತಿದಾರರಾದ ಶ್ರೀಮತಿ ಚಂದ್ರಕಲಾ ಬಿನ್ ನರಸಿಂಹೇಗೌಡ, ಸೋನಹಳ್ಳಿ ಗ್ರಾಮ, ಹುಣಸೂರು ತಾಲ್ಲೂಕು, ಇವರ ಸ್ಥಿರಾಸ್ತಿ ಮಾರಾಟ ಮಾಡಿರುವುದನ್ನು ಸ್ಥಿರೀಕರಿಸುವ ಬಗ್ಗೆ.

**ಉಲ್ಲೇಖ:** ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್, ಹುಣಸೂರು ಶಾಖೆಯ ಮಾರಾಟಾಧಿಕಾರಿ ಇವರ ವರದಿ ದಿನಾಂಕ: 13.02.2004.

ಕರ್ನಾಟಕ ರಾಜ್ಯ ಸಹಕಾರ ಸಂಘಗಳ 1960ರ ನಿಯಮಾವಳಿ 38(6)(ಎ) ಗಳ ಅನುಗುಣವಾಗಿ ಮಾರಾಟಾಧಿಕಾರಿಗಳು ದಿನಾಂಕ: 06.02.2004 ರಂದು ನಡವಳಿಕೆ ಮಾಡಿರುತ್ತಾರೆ.

ಶ್ರೀಮತಿ ಚಂದ್ರಕಲಾ ಬಿನ್ ನರಸಿಂಹೇಗೌಡ, ಸೋನಹಳ್ಳಿ ಗ್ರಾಮ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆರವರು ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ, ಪ್ರಧಾನ ಕಛೇರಿ, ನೆಹರೂ ಸರ್ಕಲ್, ಮೈಸೂರಿನಲ್ಲಿ ದಿನಾಂಕ: 1.2.1988 ರಲ್ಲಿ ಕ್ರಸಿಂಗ್ ಇಂಡಸ್ಟ್ರೀಸ್‌ನ್ನು ಸ್ಥಾಪನೆ ಮಾಡಲು ಬ್ಯಾಂಕಿನಿಂದ ರೂ.1,20,000 (ಒಂದು ಲಕ್ಷದ ಇಪ್ಪತ್ತು ಸಾವಿರ ರೂ.ಗಳು ಮಾತ್ರ) ಗಳ ಕೈಗಾರಿಕಾ ಸಾಲವನ್ನು ಪಡೆದಿರುತ್ತಾರೆ. ಈ ಸಾಲಕ್ಕೆ ಹುಣಸೂರು ತಾಲ್ಲೂಕು, ಬಿಳಿಕೆರೆ ಹೋಬಳಿ, ಯಲಚನಹಳ್ಳಿ ಗ್ರಾಮಕ್ಕೆ ಸೇರಿದ ಸರ್ವೆ ನಂ.1:1 ರಲ್ಲಿನ 4.38 ಎಕರೆ ಖುಷ್ಕಿ ಜಮೀನನ್ನು ಈಡು ಮಾಡಿರುತ್ತಾರೆ. ಇವರು ಸಾಲ ಪಡೆದು ಮರು ಪಾವತಿ ಮಾಡದೆ ಸುಸ್ತಿದಾರರಾಗಿರುತ್ತಾರೆ. ಅಜ್ಞಾಪ್ತಿತದಾರಕರಾದ ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ ನಿ, ಮೈಸೂರು ಇದರ ವ್ಯವಸ್ಥಾಪಕ ನಿರ್ದೇಶಕರು ಪಂಚಾಯ್ತಿ ತೀರ್ಪಿನ ಪ್ರತಿಯನ್ನು ಪಡೆದಿರುತ್ತಾರೆ ಮತ್ತು ವಸೂಲಾತಿ ನಡವಳಿಕೆ ಕ್ರಮಕ್ಕಾಗಿ ಮಾರಾಟಾಧಿಕಾರಿಗಳಿಗೆ ಕಳುಹಿಸಿರುವುದಕ್ಕೆ ಸಂಬಂಧಿಸಿದಂತೆ ರೂ.1,69,752 ಇತರೆ ಅಜ್ಞಾಪ್ತಿತ ಮೊಬಲಗನ್ನು ವಸೂಲಿ ಮಾಡುವುದಕ್ಕಾಗಿ ಅವಾರ್ಡ್ ನಂ. ಜಿ.ಆರ್.ಎಂ.ಡಿ.ಡಿ.ಎಸ್. 586:90-91, ದಿನಾಂಕ: 22.3.1991 ರಂದು ಡಿಕ್ರಿ ಪಡೆದು ದಿನಾಂಕ: 25.5.1991 ರಂದು ಅಮಲ್ಜಾರಿಯನ್ನು (ನಂ.123:91-92) ಕೂಡ ಪಡೆದುಕೊಂಡಿರುತ್ತಾರೆ. ಮಾರಾಟಾಧಿಕಾರಿಗಳು ಶ್ರೀಮತಿ ಚಂದ್ರಕಲಾ ರವರು ಈಡು ಮಾಡಿದ್ದ ಸ್ಥಿರಾ ಆಸ್ತಿಯನ್ನು ಹರಾಜ್ ಹಾಕಲು ದಿನಾಂಕ: 30.1.2004ನೇ ಶುಕ್ರವಾರ ಮಧ್ಯಾಹ್ನ 3.30 ಘಂಟೆಗೆ ನಿಗದಿಪಡಿಸಿ ಸಂಬಂಧಿಸಿದ ಸ್ಥಳಗಳಲ್ಲಿ ಟಾಂ ಟಾಂ ಹೊಡೆಸಲಾಯಿತು. ನಿಗದಿಪಡಿಸಿದ ದಿನಾಂಕದಂದು ಹರಾಜು ಪ್ರಕ್ರಿಯೆ ಪ್ರಾರಂಭಿಸಲಾಗಿ ಬಿಡ್ಡುದಾರರು ಬಾರದೇ ಇದ್ದುದರಿಂದ ಮಾರಾಟಾಧಿಕಾರಿಯವರು ತಮ್ಮ ದತ್ತವಾಗಿರುವ ಅಧಿಕಾರದನ್ವಯ ಏಳು ದಿವಸಗಳಿಗೆ ಮುಂದೂಡಿ ದಿನಾಂಕ: 6.2.2004ರ ಶುಕ್ರವಾರ 11.30 ಘಂಟೆಗೆ ಬಹಿರಂಗ ಹರಾಜನ್ನು ನಿಗದಿಪಡಿಸಿ ಪ್ರಕಟಣೆ ಮಾಡಲಾಯಿತು. ಹಾಗೂ ಸಂಬಂಧಿಸಿದ ಸ್ಥಳಗಳಲ್ಲಿ ಟಾಂ ಟಾಂ ಹೊಡೆಸುವುದರ ಮೂಲಕ ಪ್ರಚಾರ ಪಡಿಸಲಾಯಿತು. ಸದರಿ ದಿನಾಂಕದಂದು ಶುಕ್ರವಾರ 11.30 ಘಂಟೆಗೆ ಹುಣಸೂರು ತಾಲ್ಲೂಕಿನ ಯಲಚನಹಳ್ಳಿ ಗ್ರಾಮದಲ್ಲಿ ಬಹಿರಂಗ ಹರಾಜು ನಡವಳಿಕೆಯನ್ನು ನಡೆಸಿ, ಬಿಡ್‌ನಲ್ಲಿ ಭಾಗವಹಿಸಿದ ಶ್ರೀ ಪಿ.ಆರ್. ಸ್ವಾಮಿ ಬಿನ್ ಪಳನಿಸ್ವಾಮಿ ತೇವರ, ದೇವಗಳ್ಳಿ ಗ್ರಾಮ, ಬಿಳಿಕೆರೆ ಹೋಬಳಿ, ಕರಿಮುದ್ದನ ಹಳ್ಳಿ, ಅಂಚೆ, ಹುಣಸೂರು ತಾಲ್ಲೂಕು ಇದರ ಪರವಾಗಿ ಮಾರಾಟಾಧಿಕಾರಿಗಳು 2,20,000 ರೂ.ಗಳಿಗೆ ಬಿಡ್ಡುನಿಲ್ಲಿಸಿ, ಸದರಿಯವರಿಗೆ ಖಾಯಂ ಮಾಡಲು ವರದಿಯನ್ನು ಸಲ್ಲಿಸಿರುತ್ತಾರೆ. ಹಾಗೂ ಬಿಡ್‌ದಾರರಾದ ಶ್ರೀ ಪಿ.ಆರ್. ಸ್ವಾಮಿಯವರು ಪೂರ್ತಾ ಮೊಬಲಗನ್ನು ನಿಗದಿತ ದಿನಾಂಕದೊಳಗೆ ಸಂದಾಯ ಮಾಡಿರುವುದರಿಂದ, ಸಹಕಾರ ಸಂಘಗಳ ನಿಯಮಾವಳಿ 38(5) (ಎ) ಕ್ಕೆ ಸಂಬಂಧಿಸಿದಂತೆ ಹರಾಜಿನ ದಿನಾಂಕದಿಂದ 30 ದಿನಗಳಲ್ಲಿ ಯಾರಿಂದಲು ಯಾವುದೇ ತಕರಾರು ಅರ್ಜಿ ಬಂದಿಲ್ಲವಾದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ಸಂಖ್ಯೆ: ವ.ಅ:ಎಂ.ಸಿ.ಡಿ.ಸಿ.ಸಿ.ಬ್ಯಾಂಕ್ (ನಿ):22745-53:2003-04, ದಿನಾಂಕ: 8ನೇ ಮಾರ್ಚ್ 2004**

ಮೇಲೆ ವಿವರಿಸಿದ ಸಂದರ್ಭನುಸಾರ ಹಾಗೂ ಕರ್ನಾಟಕ ರಾಜ್ಯ ಸಹಕಾರ ಸಂಘಗಳ ಕಾನೂನು 1960ರ ನಿಯಮ 38(6) (ಎ)ರ ಅನುಸಾರ ನನಗೆ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಶ್ರೀ ಪಿ.ಎಲ್. ಜೋತೀಂದ್ರ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಹಾಗೂ ವಸೂಲಾತಿ ಅಧಿಕಾರಿ ನಿಯಮ 441, ಮೈಸೂರು ಮತ್ತು ಚಾಮರಾಜನಗರ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ), ಪ್ರಧಾನ ಕಛೇರಿ, ಮೈಸೂರು ಆದ ನಾನು ಈ ಕೆಳಗಿನ ಅನುಸೂಚಿಯಲ್ಲಿ ನಮೂದಿಸಿರುವ ಆಸ್ತಿಯನ್ನು ಶ್ರೀ ಪಿ.ಆರ್. ಸ್ವಾಮಿ ಬಿನ್ ಪಳನಿಸ್ವಾಮಿ ತೇವರ, ದೇವಗಳ್ಳಿ ಗ್ರಾಮ ಕರಿಮುದ್ದನಹಳ್ಳಿ ಅಂಚೆ, ಬಿಳಿಕೆರೆ ಹೋಬಳಿ, ಹುಣಸೂರು ತಾಲ್ಲೂಕು, ಮೈಸೂರು ಜಿಲ್ಲೆ, ಇವರ ಪರವಾಗಿ ಮೊಬಲಗು ರೂ.2,20,000-00 ಗಳಿಗೆ ಮಾರಾಟ ಮಾಡಿರುವುದನ್ನು ಸ್ಥಿರೀಕರಿಸುತ್ತೇನೆ.

**ಆಸ್ತಿಗಳ ಅನುಸೂಚಿ ಪಟ್ಟಿ**

| ತಾಲ್ಲೂಕು | ಗ್ರಾಮ | ಸರ್ವೆ ನಂ. | ತರಹ | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|
| ಹುಣಸೂರು | ಯಲಚನಹಳ್ಳಿ | 1:1 | ಖುಷ್ಕಿ ಜಮೀನು | 4.38 ಎಕರೆ | ಪೂರ್ವಕ್ಕೆ: ಸರ್ಕಾರಿ ರಸ್ತೆ<br>ಪಶ್ಚಿಮಕ್ಕೆ: ಕುಪ್ಪಶೆಟ್ಟಿಯವರ ಜಮೀನು<br>ಉತ್ತರಕ್ಕೆ: ಸರ್ಕಾರಿ ರಸ್ತೆ,<br>ದಕ್ಷಿಣಕ್ಕೆ: ರಾಮೇಗೌಡರ ಜಮೀನು. |

ದಿನಾಂಕ: 8.03.2004 ರಂದು ನನ್ನ ಸ್ವಹಸ್ತ ಸಹಿ ಮತ್ತು ಮುದ್ರೆಯೊಂದಿಗೆ ಈ ಆದೇಶವನ್ನು ಹೊರಡಿಸಲಾಗಿದೆ.

**ಪಿ.ಎಲ್. ಜೋತೀಂದ್ರ**

ಪಿ.ಆರ್. 703 ಸಹಕಾರಿ ಸಂಘಗಳ ಸಹಾಯಕ ನಿಬಂಧಕರು, ಹಾಗೂ ವಸೂಲಾತಿ ಅಧಿಕಾರಿ, ನಿಯಮ 441,
ಮೈಸೂರು ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್, ನಿಯಮಿತ, ಪ್ರಧಾನ ಕಛೇರಿ, ಮೈಸೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:36/2004, ದಿನಾಂಕ: 30ನೇ ಏಪ್ರಿಲ್ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1) ಶ್ರೀಮತಿ ಲಕ್ಷ್ಮಮ್ಮ ಕೋಂ ಲೇಟ್ ವೆಂಕಟರಾಮಯ್ಯ, 40 ವರ್ಷ
2) ಶ್ರೀಧರ ಬಿನ್ ಲೇಟ್ ವೆಂಕಟರಾಮಯ್ಯ
3) ಲತಾ ಮಗಳು ಲೇಟ್ ವೆಂಕಟರಾಮಯ್ಯ

**ವಿಳಾಸ:** ರಾಮೇಶ್ವರ ಗ್ರಾಮ, ದೊಡ್ಡಬಳ್ಳಾಪುರ ತಾಲ್ಲೂಕು.
ಬೆಂಗಳೂರು ರೂರಲ್ ಜಿಲ್ಲೆ.
**ಈಗಿನ ವಿಳಾಸ:** ಹಬ್ಬತನಹಳ್ಳಿ ಗ್ರಾಮ, ಕಸಬಾ ಹೋಬಳಿ,
ತುಮಕೂರು ತಾಲ್ಲೂಕು.

1) ಸಿ. ಪ್ರಕಾಶ್ ಬಿನ್ ಚನ್ನೇಗೌಡ,
R/o ರಾಮೇಶ್ವರ ಗ್ರಾಮ ದೊಡ್ಡಬಳ್ಳಾಪುರ
ತಾಲ್ಲೂಕು, ಬೆಂಗಳೂರು ಜಿಲ್ಲೆ.
2) ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.,
ಈಶ್ವರಿ ಕಾಂಪ್ಲೆಕ್ಸ್, ಡಾ: ರಾಜಕುಮಾರ್ ರಸ್ತೆ,
ರಾಜಾಜಿನಗರ ಬ್ರಾಂಚ್,
ಬೆಂಗಳೂರು-560021.

**ಪ್ರಕಟಣೆ**

ಅರ್ಜಿದಾರರಾದ ಶ್ರೀಮತಿ ಲಕ್ಷ್ಮಮ್ಮ ಇವರು ತಮ್ಮ ಯಜಮಾನರಾದ ವೆಂಕಟರಾಮಯ್ಯ ಇವರು ಪ್ರತಿವಾದಿ ಸಿ. ಪ್ರಕಾಶ್ ಇವರ KA-12/666 ಲಾರಿಯಲ್ಲಿ ಕ್ಲೀನರ್ ಆಗಿ ಕಾರ್ಯನಿರ್ವಹಿಸುತ್ತಿದ್ದು, ದಿನಾಂಕ: 28.02.2004 ರಂದು ಉದ್ಯೋಗ ಸಮಯದಲ್ಲಿ ಶಿರಾ N.H-4 ಬೈಪಾಸ್ ರಸ್ತೆಯಲ್ಲಿ ಸಂಭವಿಸಿದ ಅಪಘಾತದಲ್ಲಿ ಮೃತರಾಗಿರುತ್ತಾರೆಂದು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರಿಗೆ ಸಲ್ಲಿಸಿರುವ ಕ್ಲೈಮ್ ಅರ್ಜಿಯಲ್ಲಿ ತಿಳಿಸಿರುತ್ತಾರೆ.

ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಪಿ.ಆರ್. 704 ತುಮಕೂರು ಜಿಲ್ಲೆ, ತುಮಕೂರು.

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯ, ತುಮಕೂರು ಜಿಲ್ಲೆ, ತುಮಕೂರು**

**ಸಂಖ್ಯೆ: ಕಾಅತು:ಕಾಪಕಾ:ಸಿಆರ್:39/2004, ದಿನಾಂಕ: 27ನೇ ಏಪ್ರಿಲ್ 2004**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

ಅನ್ನಪೂರ್ಣೇಶ್ವರಿ, ರೈಸ್ ಇಂಡಸ್ಟ್ರೀಸ್, ಕೆ.ಎ.ಐ.ಡಿ.ಬಿ.
ಅಂತರಸನಹಳ್ಳಿ, 2ನೇ ಹಂತ, ತುಮಕೂರು.

**ಪ್ರಕಟಣೆ**

ಮೃತ ಕುಮಾರ ಸ್ವಾಮಿ, ಅವರು ಪ್ರತಿವಾದಿಯವರ ರೈಸ್ ಉದ್ದಿಮೆಯಲ್ಲಿ ಕೂಲಿ ಕಾರ್ಮಿಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ಆಕಸ್ಮಿಕವಾಗಿ ಅಪಘಾತ ಹೊಂದಿ ಗಾಯಗೊಂಡು ಆಸ್ಪತ್ರೆಯಲ್ಲಿ ಚಿಕಿತ್ಸೆ ಪಡೆಯುತ್ತಿದ್ದಾಗ, ಅದೇ ದಿನ ಮರಣ ಹೊಂದಿರುತ್ತಾರೆ. ಈ ಸಂಬಂಧ ಪ್ರತಿವಾದಿಗಳು ಪರಿಹಾರ ಹಣ ರೂ.75,000/- ಗಳನ್ನು ತುಮಕೂರು ಕಾರ್ಮಿಕ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ ಜಮೆ ಮಾಡಿರುತ್ತಾರೆ.

ಆದುದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಬಗ್ಗೆ ಏನಾದರೂ ತಮ್ಮ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು

ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿತ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ, ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ತುಮಕೂರು ಜಿಲ್ಲೆ, ತುಮಕೂರು.

ಪಿ.ಆರ್. 705

**ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರ ನಡವಳಿಗಳು**

**ವಿಷಯ:** ಶ್ರೀ ಎಸ್.ಕೆ. ತಳವಾರ, ರೇಷ್ಮೆ ಪ್ರದರ್ಶಕರು ಇವರ ವಿರುದ್ಧ ಶಿಸ್ತು ಕ್ರಮ.

**ಉಲ್ಲೇಖ:**
1) ರೇಷ್ಮೆ ಜಂಟಿನಿರ್ದೇಶಕರು, ಬಿಳಿದೇವಾಲಯ ಇವರ ಪತ್ರ ದಿನಾಂಕ: 21.11.2001.
2) ರೇಷ್ಮೆ ನಿರ್ದೇಶನಾಲಯದ ತಿಳುವಳಿಕೆ ಪತ್ರ ದಿನಾಂಕ: 20.05.2002.
3) ರೇಷ್ಮೆ ವಿಸ್ತರಣಾಧಿಕಾರಿಗಳು, ತಾಂತ್ರಿಕ ಸೇವಾ ಕೇಂದ್ರ ಹುಲಿಯೂರುದುರ್ಗ ಇವರ ಪತ್ರ ದಿ: 15.6.2002.
4) ರೇಷ್ಮೆ ನಿರ್ದೇಶನಾಲಯದ ಆದೇಶ ದಿನಾಂಕ: 28.1.2003.
5) ವಿಚಾರಣಾಧಿಕಾರಿಯವರ ಪತ್ರ ಸಂಖ್ಯೆ: ರೇಜಂನಿ:ಶಿಸ್ತು:ಇವಿ:69:03-04, ದಿನಾಂಕ: 24.1.2004.
6) ರೇಷ್ಮೆ ನಿರ್ದೇಶನಾಲಯದ ತಿಳುವಳಿಕೆ ಪತ್ರ ದಿನಾಂಕ: 19.02.2004.
7) ಆಪಾದಿತ ನೌಕರರ ಲಿಖಿತ ಹೇಳಿಕೆ ದಿನಾಂಕ: 9.3.2004.

**ಪೀಠಿಕೆ:**

ರೇಷ್ಮೆ ಜಂಟಿ ನಿರ್ದೇಶಕರು, ಬಿಳಿದೇವಾಲಯ, ಇವರು ಉಲ್ಲೇಖ (1)ರ ಪತ್ರದಲ್ಲಿ ಶ್ರೀ ಎಸ್.ಕೆ. ತಳವಾರ, ರೇಷ್ಮೆ ಪ್ರದರ್ಶಕರನ್ನು ದಿನಾಂಕ: 29.09.2000 ಆದೇಶದಲ್ಲಿ ಅಮಾನತ್ತು ಆದೇಶವನ್ನು ತೆರವುಗೊಳಿಸಿ ಸೇವೆಗೆ ಪುನರ್‌ನೇಮಕ ಮಾಡಿ ತಾಂತ್ರಿಕ ಸೇವಾ ಕೇಂದ್ರ, ಸೋಲೂರಿಗೆ ನಿಯೋಜಿಸಲಾಗಿದ್ದರೂ ಶ್ರೀ ಎಸ್.ಕೆ. ತಳವಾರ್‌ರವರು ಸೋಲೂರು ತಾಂತ್ರಿಕ ಸೇವಾ ಕೇಂದ್ರದಲ್ಲಿ ಕರ್ತವ್ಯಕ್ಕೆ ಈವರೆವಿಗೂ ಹಾಜರಾಗಿರುವುದಿಲ್ಲ. ಹಾಗೂ ಸಂಬಂಧ ಜಾರಿಗೊಳಿಸಿದ ಕಛೇರಿ ಜ್ಞಾಪನ, ಆದೇಶವನ್ನು ಸ್ವೀಕರಿಸದೆ ತಿರಸ್ಕರಿಸುವ ಮೂಲಕ ಕರ್ತವ್ಯಚ್ಯುತಿ ಎಸಗಿದ್ದಾರೆಂದು ವರದಿ ಮಾಡಿದ ಅನ್ವಯ ಶ್ರೀ ಎಸ್.ಕೆ. ತಳವಾರ, ರೇಷ್ಮೆ ಪ್ರದರ್ಶಕರು ಇವರ ವಿರುದ್ಧ ಉಲ್ಲೇಖ (2)ರ ದಿನಾಂಕ: 20.05.2002ರ ಆದೇಶದಲ್ಲಿ 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ 11 ರಡಿಯಲ್ಲಿ ಶಿಸ್ತು ಕ್ರಮ ಜರುಗಿಸುವ ನಿಟ್ಟಿನಲ್ಲಿ ದೋಷಾರೋಪಣಪಟ್ಟಿಯನ್ನು ಅನುಬಂಧ-1 ರಿಂದ 4 ಅನ್ನು ಒಳಗೊಂಡಂತೆ ತಿಳುವಳಿಕೆ ಪತ್ರದೊಂದಿಗೆ ಜಾರಿಗೊಳಿಸಿ 15 ದಿನಗಳೊಳಗಾಗಿ ಆರೋಪವನ್ನು ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಬಗ್ಗೆ ಲಿಖಿತ ಹೇಳಿಕೆಯನ್ನು ಸಲ್ಲಿಸಲು ತಿಳಿಸಲಾಗಿತ್ತು.

ಶ್ರೀ ಎಸ್.ಕೆ. ತಳವಾರ, ರೇಷ್ಮೆ ಪ್ರದರ್ಶಕರ ವಿರುದ್ಧದ ಮಾಡಲಾದ ಆರೋಪಗಳು ಕೆಳಕಂಡಂತಿವೆ.

**ಆರೋಪ-1:**

ಶ್ರೀ ಎಸ್.ಕೆ. ತಳವಾರ, ರೇಷ್ಮೆ ಪ್ರದರ್ಶಕರು, ತಾಂತ್ರಿಕ ಸೇವಾ ಕೇಂದ್ರ, ಹುಲಿಯೂರು ದುರ್ಗ ಆದ ನೀವು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ಕೃಷಿ ನಿರ್ದೇಶಕರ ದಿನಾಂಕ: 29.09.2000 ಆದೇಶದಲ್ಲಿ ಅಮಾನತ್ತನ್ನು ತೆರವುಗೊಳಿಸಿ ವಿಚಾರಣೆ ಕಾಯ್ದಿರಿಸಿ, ಕಛೇರಿ ಕೆಲಸಕ್ಕೆ ಪುನರ್‌ನೇಮಕ ಮಾಡಿ ತಾಂತ್ರಿಕ ಸೇವಾ ಕೇಂದ್ರ, ಸೋಲೂರಿಗೆ ನಿಯೋಜಿಸಿದ ಸ್ಥಳದಲ್ಲಿ ಕಾರ್ಯವರದಿ ಮಾಡಿಕೊಂಡಿಲ್ಲದಿರುವುದು.

ಶ್ರೀ ಎಸ್.ಕೆ. ತಳವಾರ, ರೇಷ್ಮೆ ಪ್ರದರ್ಶಕರು ತಾಂತ್ರಿಕ ಸೇವಾ ಕೇಂದ್ರ, ಹುಲಿಯೂರು ದುರ್ಗ ಆದ ನೀವು ಮೇಲಾಧಿಕಾರಿಗಳಿಂದ ಜಾರಿಗೊಳಿಸಲಾದ ತಿಳುವಳಿಕೆ ಪತ್ರ, ಜ್ಞಾಪನಪತ್ರ ಮತ್ತು ಆದೇಶಗಳನ್ನು ನೋಂದಾಯಿತ ಅಂಚೆ ಮತ್ತು ಮುದ್ದಾಂ ಪಡೆಯಲು ನಿರಾಕರಿಸಿ, ಸರ್ಕಾರಿ ಕೆಲಸಕ್ಕೆ ಅವಿಧೇಯತೆ ಮತ್ತು ನಿರ್ಲಕ್ಷತೆ ತೋರಿ ದುರ್ನಡತೆ ಎಸಗಿರುವುದು.

ಉಲ್ಲೇಖ (3)ರ ದಿನಾಂಕ: 15.06.2002ರ ಪತ್ರದಲ್ಲಿ ರೇಷ್ಮೆ ವಿಸ್ತರಣಾಧಿಕಾರಿಗಳು ಹುಲಿಯೂರುದುರ್ಗ ಇವರು ನಿರ್ದೇಶನಾಲಯದ ದಿನಾಂಕ: 20.05.2002ರ ತಿಳುವಳಿಕೆ ಪತ್ರವನ್ನು ಜಾರಿಗೊಳಿಸಲು ಕಳುಹಿಸಿದ್ದರೂ ಆಪಾದಿತರು ಸ್ವೀಕರಿಸದೆ ತಿರಸ್ಕರಿಸಿರುವುದಾಗಿ ಅಂಚೆ ಇಲಾಖೆಯಿಂದ ಷರಾದೊಂದಿಗೆ ವಾಪಸ್ಸು ಬಂದಿರುವುದಾಗಿ ಹೇಳಿರುತ್ತಾರೆ. ಶ್ರೀ ಎಸ್.ಕೆ. ತಳವಾರ್, ರೇಷ್ಮೆ ಪ್ರದರ್ಶಕರು, ಇವರು ದೋಷಾರೋಪಣಪಟ್ಟಿಗೆ ಲಿಖಿತ ಹೇಳಿಕೆಯನ್ನು ಸಲ್ಲಿಸದಿದ್ದ ಕಾರಣ, ಆಪಾದನೆಗಳ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸುವುದು ಅವಶ್ಯವಾದುದರಿಂದ ಉಲ್ಲೇಖ (4)ರ ದಿನಾಂಕ: 28.01.2003 ರಲ್ಲಿ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಗಳನ್ನು ನೇಮಕ ಮಾಡಿ ಸಿ.ಸಿ.ಎ. ನಿಯಮ (11) ರನ್ವಯ ವಿಚಾರಣೆಯನ್ನು ನಡೆಸಿ ವಿಚಾರಣಾ ವರದಿಯನ್ನು ಸಲ್ಲಿಸಲು ಆದೇಶಿಸಲಾಯಿತು.

ವಿಚಾರಣಾಧಿಕಾರಿಗಳು ಸಿ.ಸಿ.ಎ. ನಿಯಮದನ್ವಯ ವಿಚಾರಣೆಯನ್ನು ನಡೆಸಿ ಉಲ್ಲೇಖ (5)ರ ದಿನಾಂಕ: 24.01.2004 ರಲ್ಲಿ ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಹಾಗೂ ವಿಚಾರಣೆಯಲ್ಲಿ ಆಪಾದಿತರ ವಿರುದ್ಧ ಮಾಡಲಾದ ಎರಡು ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯವನ್ನು ನೀಡಿರುತ್ತಾರೆ. ಆಪಾದನೆಗಳು ಸಾಬೀತಾಗಿರುವುದರಿಂದ ವಿಚಾರಣಾ ವರದಿಯಲ್ಲಿನ ಅಭಿಪ್ರಾಯದ ಬಗ್ಗೆ ಆಪಾದಿತರಿಂದ ಲಿಖಿತ ಹೇಳಿಕೆಯನ್ನು ಪಡೆಯುವುದು ಅವಶ್ಯವಾದ್ದರಿಂದ ಉಲ್ಲೇಖ (6)ರ ದಿನಾಂಕ: 19.02.2004 ರಲ್ಲಿ ವಿಚಾರಣಾ ವರದಿಯನ್ನೊಳಗೊಂಡ ತಿಳುವಳಿಕೆ ಪತ್ರವನ್ನು ಆಪಾದಿತರಿಗೆ ಜಾರಿಗೊಳಿಸಿ ವಿಚಾರಣಾಧಿಕಾರಿಗಳ ಅಭಿಪ್ರಾಯದ ಬಗ್ಗೆ ಹೇಳಿಕೆ ಏನಾದರೂ ಇದ್ದರೆ ನಿಗದಿತ ಅವಧಿಯೊಳಗೆ ಸಲ್ಲಿಸಲು ಇಲ್ಲವಾದಲ್ಲಿ ಏಕಪಕ್ಷೀಯವಾಗಿ ನಿರ್ಣಯವನ್ನು ತೆಗೆದುಕೊಳ್ಳಲಾಗುವುದೆಂದು ತಿಳಿಸಲಾಗಿತ್ತು. ಆಪಾದಿತರು ತಿಳುವಳಿಕೆ ಪತ್ರಕ್ಕೆ ಉಲ್ಲೇಖ (7)ರ ದಿನಾಂಕ: 09.03.2004 ರಲ್ಲಿ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ.

ವಿಚಾರಣಾಧಿಕಾರಿಗಳು ಸಲ್ಲಿಸಲಾದ ವರದಿಯ ಪ್ರಕಾರ ಶ್ರೀ ಎಸ್.ಕೆ. ತಳವಾರ್‌ರವರ ವಿರುದ್ಧ ಆರೋಪಗಳು ದೃಢಪಟ್ಟಿದ್ದು, ಅದನ್ನು ಕೆಳಗಿನಂತೆ ನಮೂದಿಸಿದೆ.

**ಆರೋಪ-1:**

ಶ್ರೀ ಎಸ್.ಕೆ. ತಳವಾರ್, ರೇಷ್ಮೆ ಪ್ರದರ್ಶಕರನ್ನು ದಿನಾಂಕ: 29.09.2000ರ ಆದೇಶದಲ್ಲಿ ಅಮಾನತ್ತನ್ನು ರದ್ದುಗೊಳಿಸಿ, ಕೆಲಸಕ್ಕೆ ಪುನರ್‌ನೇಮಕ ಮಾಡಿ ತಾಂತ್ರಿಕ ಸೇವಾ ಕೇಂದ್ರ, ಸೋಲೂರಿಗೆ ನಿಯೋಜಿಸಿದ ಆದೇಶವನ್ನು ನೋಂದಾಯಿತ ಅಂಚೆ ಮೂಲಕ ದಿನಾಂಕ: 05.10.2000 ರಂದು ಆರೋಪಿತರಿಗೆ ರೇಷ್ಮೆ ವಿಸ್ತರಣಾಧಿಕಾರಿಗಳು, ತಾಂತ್ರಿಕ ಸೇವಾ ಕೇಂದ್ರ, ಸೋಲೂರು ಇವರು ಕಳುಹಿಸಿರುತ್ತಾರೆ. ಆದರೆ ಸದರಿ ಅಂಚೆಯನ್ನು ನಿರಾಕರಿಸಿ ತೆಗೆದುಕೊಂಡಿಲ್ಲ ಎಂಬ ಷರಾದೊಂದಿಗೆ ಅಂಚೆ ವಾಪಸ್ಸು ಬಂದಿರುತ್ತದೆ. ಮುದ್ದಾಂ ಜಾರಿಗೊಳಿಸಲು ಇಲಾಖಾ ಸಿಬ್ಬಂದಿ ಅವರ ಮನೆಗೆ ತೆರಳಿದಾಗಲೂ ಆದೇಶ ಸ್ವೀಕರಿಸಿರುವುದಿಲ್ಲ. ಜಾರಿಗೊಳಿಸಲು ತೆರಳಿದ ನೌಕರರನ್ನು ಅವಾಚ್ಯ ಶಬ್ದಗಳಿಂದ ಬೈದು ವಾಪಸ್ಸು ಕಳುಹಿಸಿರುತ್ತಾರೆ. ನಿಯೋಜಿಸಿದ ಸ್ಥಳದಲ್ಲಿ ಕಾರ್ಯ ವರದಿ ಮಾಡಿಕೊಂಡಿರುವುದಿಲ್ಲವೆಂದು ರೇಷ್ಮೆ ವಿಸ್ತರಣಾಧಿಕಾರಿಗಳು, ತಾಂತ್ರಿಕ ಸೇವಾ ಕೇಂದ್ರ, ಸೋಲೂರು ಇವರು ದಿನಾಂಕ: 04.09.2001 ರಂದು ವರದಿ ಮಾಡಿರುವುದು ಹಾಗೂ ಈ ತಹಲ್‌ವರೆಗೆ ಸರ್ಕಾರಿ ಕೆಲಸಕ್ಕೆ ಗೈರುಹಾಜರಾಗಿರುವುದು ವಿಚಾರಣಾ ಸಮಯದಲ್ಲಿ ಮಂಡಿಸಲಾದ ಸಾಕ್ಷ್ಯ ಹಾಗೂ ದಾಖಲೆಗಳಿಂದ ದೃಢಪಟ್ಟಿದೆ.

**ಆರೋಪ-2:**

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಇವರು ಜಾರಿಗೊಳಿಸಲು ಹೊರಡಿಸಲಾದ ಎರಡನೇ ತಿಳುವಳಿಕೆ ಪತ್ರ ಪುನರ್ ನೇಮಕದ ಆದೇಶ, ರೇಷ್ಮೆ ವಿಸ್ತರಣಾಧಿಕಾರಿ, ತಾಂತ್ರಿಕ ಸೇವಾ ಕೇಂದ್ರ, ಸೋಲೂರು, ಹುಲಿಯೂರುದುರ್ಗ ಇವರು ಕಳುಹಿಸಲಾದ ಪತ್ರಗಳನ್ನು ಅಂಚೆ ಮೂಲಕ ಸ್ವೀಕರಿಸಲು ನಿರಾಕರಿಸಿರುವುದು ಅಂಚೆ ಲಕೋಟೆಗಳಿಂದ ದೃಢಪಟ್ಟಿರುತ್ತದೆ. ಹಾಗೂ ನೌಕರರು ತಿಳುವಳಿಕೆ ಪತ್ರ, ಮುದ್ದಾಂ ತಲುಪಿಸಲು ತೆರಳಿದ್ದಾಗ ಪತ್ರವನ್ನು ಪಡೆಯದೇ ಹೋಗಿದ್ದ ನೌಕರರ ಮೇಲೆ ದೌರ್ಜನ್ಯವೆಸಗಿರುವುದು ಸಾಕ್ಷಿಗಳ ಹೇಳಿಕೆಯಿಂದ ದಾಖಲೆಗಳಿಂದ ದೃಢಪಟ್ಟಿರುವುದಾಗಿ ಹೇಳಿರುತ್ತಾರೆ. ಆರೋಪಿತರು ದಿನಾಂಕ: 09.03.2004 ರಲ್ಲಿ ಲಿಖಿತ ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ಸದರಿ ಲಿಖಿತ ಹೇಳಿಕೆಯಲ್ಲಿ ಅವರ ಎಲ್ಲಾ ಬೇಡಿಕೆಗಳನ್ನು ಈಡೇರಿಸಿ ಅವರು ಕೇಳುವಷ್ಟು ಹಣವನ್ನು ಕೊಡಿಸಿದರೆ ಮಾತ್ರ ಅವರು ಸರ್ಕಾರಿ ಕೆಲಸಕ್ಕೆ ಹಾಜರಾಗುವುದಾಗಿ ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಗಳ ವರದಿ ಹಾಗೂ ವಿಚಾರಣೆಯ ಸಮಯದಲ್ಲಿ ಪರಿಶೀಲಿಸಲಾದ ದಾಸ್ತಾವೇಜುಗಳು ಹಾಗೂ ಸಾಕ್ಷಿಗಳ ಹೇಳಿಕೆ ಹಾಗೂ ಆಪಾದಿತರ ಲಿಖಿತ ಹೇಳಿಕೆಯನ್ನು ಪರಿಶೀಲಿಸಿದಾಗ ಆಪಾದಿತರು ಸೇವೆಗೆ ಪುನರ್‌ನೇಮಕ ಮಾಡಿದ ಸ್ಥಳದಲ್ಲಿ ಕೆಲಸಕ್ಕೆ ಹಾಜರಾಗದಿರುವುದು ದೃಢಪಟ್ಟಿರುತ್ತದೆ. ಹಾಗೂ ಕಛೇರಿ ತಿಳುವಳಿಕೆ ಜ್ಞಾಪನ ಹಾಗೂ ಆದೇಶಗಳನ್ನು ತಿರಸ್ಕರಿಸಿರುವುದು ಸಹ ದೃಢಪಟ್ಟಿರುವುದರಿಂದ ಹಾಗೂ ವಿಚಾರಣಾ ವರದಿಯನ್ನು ಜಾರಿಗೊಳಿಸಿದಾಗ ಸಲ್ಲಿಸಿರುವ ಲಿಖಿತ ಹೇಳಿಕೆ ಬೇಜವಾಬ್ದಾರಿಯುತ ವಾಗಿರುವುದರಿಂದ ಮತ್ತು ಶ್ರೀ ಎಸ್.ಕೆ. ತಳವಾರ್, ರೇಷ್ಮೆ ಪ್ರದರ್ಶಕರು ಇವರ ವಿರುದ್ಧದ ಆಪಾದನೆಗಳು ಗಂಭೀರವಾಗಿದ್ದು ಸರ್ಕಾರಿ ಕೆಲಸಕ್ಕೆ ಈವರೆವಿಗೂ ಹಾಜರಾಗದಿರುವುದು ಹಾಗೂ ವಿಚಾರಣೆಯಲ್ಲಿ ಆರೋಪಿಗಳು ದೃಢಪಟ್ಟಿರುವುದರಿಂದ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿ ಈ ಆದೇಶ.

**ಆದೇಶ ಸಂಖ್ಯೆ: ಸಿಬ್ಬಂದಿ 3:(ಬಿ):ಶಿಸ್ತು:3:2001-02, ಬೆಂಗಳೂರು, ದಿನಾಂಕ: 6ನೇ ಏಪ್ರಿಲ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳನ್ವಯ ಹಾಗೂ 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ ನಿಯಮ 11 ಮತ್ತು 11ಎ ನಿಯಮಗಳನುಸಾರ ಮತ್ತು 9ನೇ ನಿಯಮದಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಅರವಿಂದ ಜನ್ನು, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಹಾಗೂ ಶಿಸ್ತುಪ್ರಾಧಿಕಾರಿಯಾದ ನಾನು ಶ್ರೀ ಎಸ್.ಕೆ. ತಳವಾರ, ರೇಷ್ಮೆ ಪ್ರದರ್ಶಕರು ತಾಂತ್ರಿಕ ಸೇವಾ ಕೇಂದ್ರ, ಸೋಲೂರು ಇವರನ್ನು ಸದರಿ ನಿಯಮ 8(VIII) ರಲ್ಲಿ ನಿರ್ದಿಷ್ಟಪಡಿಸಿರುವಂತೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾ ಮಾಡಿ ಆದೇಶಿಸಿರುತ್ತೇನೆ.

ಪಿ.ಆರ್. 706 ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಇವರ ನ್ಯಾಯಾಲಯ**

**ಆದೇಶ ಸಂಖ್ಯೆ: ಎ6-ಸಾಗುವಾನಿ.ಪ್ರಕರಣ.ಇತರೆ/2003-04, ದಿನಾಂಕ: 21ನೇ ಏಪ್ರಿಲ್ 2004**

**ವಿಷಯ:** ಅಕ್ರಮವಾಗಿ ಸಾಗುವಾನಿ ಮರದ ತುಂಡುಗಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನ ಸಂಖ್ಯೆ: ಕೆಎ-27-3189 ಮಹೇಂದ್ರ ಮಿನಿ ಮ್ಯಾಕ್ಸಿಕ್ಯಾಬ್‌ನ್ನು ಮತ್ತು ಅದರಲ್ಲಿದ್ದ 9 ಸಾಗುವಾನಿ ಮರದ ತುಂಡುಗಳನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** 1) ಪೊಲೀಸ್ ಉಪ ನಿರೀಕ್ಷಕರು, ಅಪರಾಧ ವಿಭಾಗ, ಗ್ರಾಮಾಂತರ ಪೊಲೀಸ್ ಠಾಣೆ, ಚಿತ್ರದುರ್ಗ ಇವರ ಕಛೇರಿಯ ಗುನ್ನೆ ದಾಖಲೆ ಸಂಖ್ಯೆ: 193/03 ದಿನಾಂಕ: 4.6.2003.

2) ಈ ಪ್ರಾಧಿಕಾರದ ಕಾರಣ ಕೇಳಿ ನೋಟೀಸ್ ದಿನಾಂಕ: 19.2.2004.

**ಪ್ರಸ್ತಾವನೆ:**

ಪೊಲೀಸ್ ಉಪ ನಿರೀಕ್ಷಕರು, ಅಪರಾಧ ವಿಭಾಗ, ಚಿತ್ರದುರ್ಗ ಇವರು ದಿನಾಂಕ: 4.6.2003 ರಂದು ಬೆಳಿಗ್ಗೆ 11.15 ಗಂಟೆಗೆ ಚಿತ್ರದುರ್ಗ ಸ್ವಾತಿ ಹೋಟೆಲ್ ಮುಂದೆ ಇರುವ ರಾಷ್ಟ್ರೀಯ ಹೆದ್ದಾರಿ-4 ರಲ್ಲಿ ಗಸ್ತು ಮಾಡುತ್ತಿರುವಾಗ ಕೆಎ-27-3189 ಮಹೇಂದ್ರ ಮಿನಿ ಮ್ಯಾಕ್ಸಿ ಕ್ಯಾಬ್‌ನಲ್ಲಿ 9 ಸಾಗುವಾನಿ ಮರದ ತುಂಡುಗಳನ್ನು ಅಕ್ರಮವಾಗಿ ಸಾಗಾಣಿಕೆ ಮಾಡುತ್ತಿದ್ದಾಗ ವಾಹನ ಮತ್ತು ಸಾಗುವಾನಿ ತುಂಡುಗಳನ್ನು ಅಮಾನತ್ತು ಪಡಿಸಿಕೊಂಡು ಗ್ರಾಮಾಂತರ ಪೊಲೀಸ್ ಠಾಣೆ ಚಿತ್ರದುರ್ಗ ಗುನ್ನೆ ಸಂಖ್ಯೆ: 193/03 ರಲ್ಲಿ ಪ್ರಕರಣವನ್ನು

ದಾಖಲಿಸಿ ತನಿಖೆ ನಡೆಸಿ, ಸದರಿ ಪ್ರಕರಣದಲ್ಲಿ ಅಮಾನತ್ತು ಪಡಿಸಿಕೊಂಡ 9 ಸಾಗುವಾನಿ ಮರದ ತುಂಡುಗಳನ್ನು ಮತ್ತು ಸಾಗಿಸಲು ಉಪಯೋಗಿಸಿದ ವಾಹನವನ್ನು ಈ ಪ್ರಾಧಿಕಾರದ ಮುಂದೆ ಹಾಜರುಪಡಿಸಿ ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ 71(ಎ) ಅಡಿಯಲ್ಲಿ ಕ್ರಮ ತೆಗೆದುಕೊಳ್ಳಲು ಕೋರಿರುತ್ತಾರೆ.

ಸದರಿ ಪ್ರಕರಣವು ಚಿತ್ರದುರ್ಗ ಗ್ರಾಮಾಂತರ ಪೊಲೀಸ್ ಠಾಣೆಯಲ್ಲಿ ಗುನ್ನೆ ಸಂಖ್ಯೆ: 193/03 ಎಂದು ದಾಖಲಿಸಲ್ಪಟ್ಟಿದೆ. ಸದರಿ ವಾಹನ ಸಂಖ್ಯೆ: ಕೆಎ-27-3189 ಮತ್ತು 9 ಸಾಗುವಾನಿ ಮರದ ತುಂಡುಗಳನ್ನು ವಲಯ ಅರಣ್ಯಾಧಿಕಾರಿ, ಚಿತ್ರದುರ್ಗ ವಲಯ, ಚಿತ್ರದುರ್ಗ ಇವರ ವಶದಲ್ಲಿರಿಸಿಕೊಳ್ಳಲು ಈ ಪ್ರಾಧಿಕಾರವು ಆದೇಶಿಸಿದೆ.

ಸದರಿ ಪ್ರಕರಣಕ್ಕೆ ಸಂಬಂಧಿಸಿದ ಪ್ರಥಮ ವರ್ತಮಾನ ವರದಿ, ಪಂಚನಾಮ ಹಾಗೂ ಸ್ವತ್ತಿನ ಪಟ್ಟಿ ಸಂಖ್ಯೆ: ಪಿ.ಎಫ್.ನಂ.108/03ನ್ನು ದಿನಾಂಕ: 4.6.2003ರ ನಕಲುಗಳನ್ನು ಉಲ್ಲೇಖ (1)ರ ಪತ್ರದ ಮೂಲಕ ಈ ಪ್ರಾಧಿಕಾರದ ಮುಂದೆ ಹಾಜರು ಪಡಿಸಿರುತ್ತಾರೆ. ವಾಹನದ ಮಾಲೀಕರಾದ ಶ್ರೀ ಗಂಗಾಧರ ಶಂಕರಪ್ಪ ಬಿದರಣ್ಣ ಬಿನ್ ಶಂಕರಪ್ಪ, ಆಲದಕಟ್ಟೆ ಗ್ರಾಮ ಇವರು ತಮ್ಮ ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ವಕಾಲತ್ತು ಸಲ್ಲಿಸಿ ವಾಹನವನ್ನು ತಾತ್ಕಾಲಿಕ ಮಧ್ಯಂತರ ವಶಕ್ಕೆ ನೀಡುವಂತೆ ಕೋರಿ ದಿನಾಂಕ: 22.8.2003 ರಂದು ಮನವಿ ಸಲ್ಲಿಸಿರುತ್ತಾರೆ. ಸಹಾಯಕ ಅಭಿಯೋಗ ನಿರ್ದೇಶಕರು, ಚಿತ್ರದುರ್ಗ ಇವರ ತಕರಾರು ದಿನಾಂಕ: 25.8.2003 ರನ್ವಯ ಸದರಿಯವರ ಮನವಿಯನ್ನು ಈ ಪ್ರಾಧಿಕಾರದ ಆದೇಶ ದಿನಾಂಕ: 15.10.2003 ರಲ್ಲಿ ತಿರಸ್ಕರಿಸಿ ಆದೇಶ ಹೊರಡಿಸಿದೆ.

ತದನಂತರ ಅಕ್ರಮಸಾಗಾಣಿಕೆಯಲ್ಲಿ ಬಳಸಲಾದ ವಾಹನ ಮಹೇಂದ್ರ ಮಿನಿ ಮ್ಯಾಕ್ಸಿಕ್ಯಾಬ್ ಸಂಖ್ಯೆ: ಕೆಎ-27-3189ರ ಮಾಲೀಕರು ಶ್ರೀ ಗಂಗಾಧರ ಶಂಕರಪ್ಪ ಬಿದರಣ್ಣ ಬಿನ್ ಶಂಕರಪ್ಪ, ಆಲದಕಟ್ಟೆ ಗ್ರಾಮ, ಬೆಲಗಲ ಪೇಟೆ ಪೋಸ್ಟ್, ಹಾನಗಲ್ ತಾಲ್ಲೂಕು, ಹಾವೇರಿ ಜಿಲ್ಲೆ, ಎಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಹಾವೇರಿ ಇವರು ನೀಡಿರುವ ವಾಹನದ 'ಬಿ' ವಹಿಯ ಉದ್ಧೃತ ಭಾಗದನ್ವಯ ತಿಳಿದು ಬಂದ ಕಾರಣ ಸದರಿಯವರಿಗೆ ಈ ಪ್ರಾಧಿಕಾರದಿಂದ ವಾಹನ ಸಂಖ್ಯೆ: ಕೆಎ-27-3189 ಮತ್ತು ಅದರಲ್ಲಿ ಅಕ್ರಮವಾಗಿ ಸಾಗಿಸುತ್ತಿದ್ದ 9 ಸಾಗುವಾನಿ ಮರದ ತುಂಡುಗಳನ್ನು ಏಕೆ ಸರ್ಕಾರದ ಪರ ಮುಟ್ಟುಗೋಲು ಹಾಕಿ ಕೊಳ್ಳಬಾರದು ಎಂಬುದಕ್ಕೆ ಸೂಕ್ತ ದಾಖಲೆಗಳೊಂದಿಗೆ ಅಹವಾಲು ಸಲ್ಲಿಸುವಂತೆ 15 ದಿನಗಳ ಕಾಲಾವಕಾಶ ನೀಡಿ ಕಾರಣ ಕೇಳಿ ನೋಟೀಸನ್ನು ದಿನಾಂಕ: 23.1.2004 ರಂದು ನೀಡಲಾಗಿತ್ತು ಹಾಗೂ ಅಹವಾಲು ಸಲ್ಲಿಸಲು ವಿಫಲರಾದಲ್ಲಿ ಪ್ರಕರಣವನ್ನು ನಿಮ್ಮ ಗೈರುಹಾಜರಿಯಲ್ಲಿ ಏಕ ಪಕ್ಷೀಯವಾಗಿ ವಿಚಾರಣೆ ನಡೆಸುವುದಾಗಿಯು ಸಹ ತಿಳಿಸಲಾಗಿತ್ತು.

ದಿನಾಂಕ: 23.1.2004 ರಂದು ಕಳುಹಿಸಿದ ಕಾರಣ ಕೇಳಿ ನೋಟೀಸ್‌ನ ನೋಂದಾಯಿತ ಅಂಚೆ ಸ್ವೀಕೃತಿ ಕವರ್‌ನ ಮೇಲೆ ಅಂಚೆ ಇಲಾಖೆಯು "ಸದರಿ ಯವರು ಪೌತಿ ಆಗಿದ್ದಾರೆ" ಎಂದು ಷರಾದೊಂದಿಗೆ ವಾಪಸ್ಸು ನೀಡಿರುತ್ತಾರೆ, ಸದರಿ ವಾಹನದ ವಾರಸುದಾರರು ಯಾರಾದರೂ ಇದ್ದಲ್ಲಿ ಅಂತಹವರ ವಿಳಾಸ ಇತ್ಯಾದಿ ವಿವರಗಳನ್ನು ಒಂದು ವಾರದೊಳಗೆ ಈ ಪ್ರಾಧಿಕಾರಕ್ಕೆ ನೀಡುವಂತೆ ದಿನಾಂಕ: 5.4.2004 ಮತ್ತು 12.4.2004 ರಲ್ಲಿ ತಹಶೀಲ್ದಾರ್, ಹಾನಗಲ್ ಮತ್ತು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಹಾವೇರಿ ಇವರುಗಳನ್ನು ಕೋರಲಾಗಿತ್ತು. ನಿಗದಿತ ಅವಧಿ ಮುಕ್ತಾಯವಾದರೂ ಸಹಾ ಯಾವುದೇ ವರದಿ ನೀಡಿರುವುದಿಲ್ಲ.

ವಾಹನದ ಇನ್ನಿತರೆ ವಾರಸುದಾರರು ಯಾರಾದರೂ ಇದ್ದ ಪಕ್ಷದಲ್ಲಿ ಈ ಪ್ರಾಧಿಕಾರದ ಮುಂದೆ ತಮ್ಮ ಅಹವಾಲನ್ನು 15 ದಿನಗಳ ಒಳಗೆ ಈ ಪ್ರಾಧಿಕಾರದ ಮುಂದೆ ಸಲ್ಲಿಸುವಂತೆ ಈ ಪ್ರಾಧಿಕಾರದಿಂದ ಕಳುಹಿಸಲಾದ ಕಾರಣಕೇಳಿ ನೋಟೀಸ್ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಿಸಲು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ, ಬೆಂಗಳೂರು ಇವರನ್ನು ದಿನಾಂಕ: 19.2.2004 ರಂದು ಕೋರಲಾಗಿ, ಸದರಿ ಪ್ರಕಟಣೆಯು ಕರ್ನಾಟಕ ರಾಜ್ಯ ಪತ್ರದ ಪುಟ ಸಂಖ್ಯೆ: 840, 841 ರಲ್ಲಿ ಪ್ರಕಟವಾಗಿರುತ್ತದೆ. ಸದರಿ ಪ್ರಕಟಣೆಯಲ್ಲಿ ನೀಡಲಾದ 15 ದಿನಗಳ ನಿಗದಿತ ಗಡವು ದಿನಾಂಕ: 2.4.2004 ರಂದೇ ಮುಕ್ತಾಯವಾದರೂ ಸಹ ಯಾವುದೇ ವ್ಯಕ್ತಿಯು ಯಾವುದೇ ಅಹವಾಲುಗಳನ್ನು ಈ ಪ್ರಾಧಿಕಾರದ ಮುಂದೆ ಸಲ್ಲಿಸದಿರುವ ಕಾರಣ ಈ ಪ್ರಾಧಿಕಾರವು ಏಕ ಪಕ್ಷೀಯವಾಗಿ ವಿಚಾರಣೆ ನಡೆಸಿ 9 ಸಾಗುವಾನಿ ಮರದ ತುಂಡುಗಳನ್ನು ಅಕ್ರಮ ಸಾಗಾಣಿಕೆ ಮಾಡಿರುವುದು ಖಚಿತವಾಗಿದ್ದು, ಈ ಪ್ರಕರಣದಲ್ಲಿ ವಶ ಪಡಿಸಿಕೊಂಡ ವಾಹನ ಮತ್ತು 9 ಸಾಗುವಾನಿ ಮರದ ತುಂಡುಗಳನ್ನು ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ 71(ಎ) (2)ರ ಮೇರೆಗೆ ಈ ಕೆಳಗಿನಂತೆ ಆದೇಶಿಸಿದೆ.

## ಆದೇಶ

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳನ್ವಯ ಜಿ.ಎಸ್. ಕರಿಯಪ್ಪ ಭಾ.ಅ.ಸೇ., ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ ವಿಭಾಗ, ಚಿತ್ರದುರ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ-1963ರ ಕಲಂ 71(ಎ) (2) ರನ್ವಯ ಪ್ರಸ್ತುತ ಪ್ರಕರಣದಲ್ಲಿ ಅಕ್ರಮ ಸಾಗಾಣಿಕೆಯಲ್ಲಿ ಅಮಾನತ್ತು ಪಡಿಸಿಕೊಳ್ಳಲಾದ ವಾಹನ ಮಹೇಂದ್ರ ಮಿನಿ ಮ್ಯಾಕ್ಸಿ ಕ್ಯಾಬ್ ಸಂಖ್ಯೆ: ಕೆಎ-27-3189ನ್ನು ಮತ್ತು 9 ಸಾಗುವಾನಿ ಮರದ ತುಂಡುಗಳನ್ನು ಸರ್ಕಾರದ ಪರವಾಗಿ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ ಮತ್ತು ಈ ವಾಹನ ಹಾಗೂ 9 ಸಾಗುವಾನಿ ಮರದ ತುಂಡುಗಳು ಎಲ್ಲಾ ಋಣಭಾರಗಳಿಂದ ಮುಕ್ತವಾಗಿರುತ್ತದೆ. ಈ ಆದೇಶವನ್ನು ದಿನಾಂಕ: 21.4.2004 ರಂದು ತೆರೆದ ನ್ಯಾಯಾಲಯದಲ್ಲಿ ನನ್ನ ಹೆಸರು ಮತ್ತು ಮೊಹರಿನಡಿ ಹೊರಡಿಸಲಾಗಿದೆ.

| | | |
|---|---|---|
| 1. | ವಾಹನದ ಮಾದರಿ | ಮಹೇಂದ್ರ ಮಿನಿ ಮ್ಯಾಕ್ಸಿ ಕ್ಯಾಬ್ |
| 2. | ನೋಂದಣಿ ಸಂಖ್ಯೆ | ಕೆಎ-27-3189 |
| 3. | ಇಂಜಿನ್ ಸಂಖ್ಯೆ | SU-33-26328 |
| 4. | ಚಾಸ್ಸಿ ಸಂಖ್ಯೆ | FJ-470-DSU-2 GU-SU-33-26328 |
| 5. | ಸಾಗುವಾನಿ ಮರದ ಪ್ರಮಾಣ | 9 ತುಂಡುಗಳು |

ಈ ಆದೇಶ ಹೊರಡಿಸಿದ 30 ದಿನಗಳ ಒಳಗೆ ಯಾರೂ ಮೇಲ್ಮನವಿ ಸಲ್ಲಿಸದೇ ಇದ್ದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಚಿತ್ರದುರ್ಗ ವಿಭಾಗ, ಚಿತ್ರದುರ್ಗ.

ಪಿ.ಆರ್. 707

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ**

**ನಂ. ಎಲ್ಎನ್‌ಡಿ:ಸಿಆರ್-131:2002-2003, ದಿನಾಂಕ: 24ನೇ ಏಪ್ರಿಲ್ 2004**

**ವಿಷಯ:** ಮಾಲೂರು ತಾಲ್ಲೂಕು ಕಸಬಾ ಹೋಬಳಿಯ ಅರಳೇರಿ ಗ್ರಾಮದ ಸ.ನಂ.282ರ ವಡ್ಡುಕುಂಟೆಯ 14 ಎಕರೆ 29 ಗುಂಟೆ ಪ್ರದೇಶದ ಜಮೀನನ್ನು ಬಗರ್ ಹುಕ್ಕುಂ ಸಾಗುವಳಿಯಲ್ಲಿರುವ ಶ್ರೀ ದೇಖಪ್ಪ ಬಿನ್ ಮುನಿಯಪ್ಪ ಮತ್ತಿತರೆ 8 ಜನರಿಗೆ ಸಕ್ರಮಗೊಳಿಸಿ ಮಂಜೂರಿ ಮಾಡುವ ಸಂಬಂಧ ಸದರಿ ಕುಂಟೆಯ ಸಾರ್ವಜನಿಕ ಹಕ್ಕು ನಿವೃತ್ತಿಗೊಳಿಸುವ ವಿಚಾರ.

**ಉಲ್ಲೇಖ:**
1) ಸರ್ಕಾರದ ಪತ್ರ ನಂ. ಆರ್‌ಡಿ 63 ಎಲ್‌ಜಿಕೆ 2002, ದಿನಾಂಕ: 24.6.2003.
2) ಈ ಕಛೇರಿಯಿಂದ 94ನೇ ನಿಯಮದ 63(1)ನೇ ಪ್ರಕರಣದ ಮೇರೆಗೆ ಘೋಷಣೆ ಸಂಬಂಧ ಹೊರಡಿಸಲಾದ ಸಮಸಂಖ್ಯೆಯ ಅಧಿಸೂಚನೆಯ ದಿನಾಂಕ: 2.12.2003.
3) ತಹಶೀಲ್ದಾರ್ ಮಾಲೂರು ತಾಲ್ಲೂಕು ರವರ ವರದಿ ನಂ. ಎಲ್ಎನ್‌ಡಿ.ಆರ್‌ಯುಓ.ಸಿಆರ್-163: 2000-01, ದಿನಾಂಕ: 16.1.2004.

**ಅಧಿಸೂಚನೆ**

**96ನೇ ನಿಯಮದ 68(5)ನೇ ಉಪ ಪ್ರಕರಣದ ಮೇರೆಗೆ ಘೋಷಣೆ**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದಲ್ಲಿನ ಕ್ರಮಗಳನ್ನು ಜರುಗಿಸಲು ರಾಜ್ಯ ಸರ್ಕಾರಕ್ಕೆ ಇರುವ ಪ್ರದತ್ತವಾದ ಅಧಿಕಾರವನ್ನು ಉಲ್ಲೇಖ (1)ರ ಸರ್ಕಾರದ ಪತ್ರದಂತೆ, ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ, ಕೋಲಾರ ಆದ ನನಗೆ ಪ್ರತ್ಯಾಯೋಜನೆಗೊಂಡಿರುವುದರಿಂದ (5)ನೇ ಉಪ ಪ್ರಕರಣದಲ್ಲಿನ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ 02.12.2003 ದಿನಾಂಕದ ಎಲ್ಎನ್‌ಡಿ.ಸಿಆರ್-131:2002-03 ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ವಡ್ಡುಕುಂಟೆ ಕೆರೆ ಅಂಗಳ ಜಮೀನಿನ ಪೂರ್ತಿ ಭಾಗವು ಸದರಿ ಕೆರೆಯ ಉಪಯೋಗಕ್ಕೆ ಅಗತ್ಯವಿಲ್ಲವೆಂದು ಮತ್ತು ಸದರಿ ಕೆರೆ ಅಂಗಳದ ಭಾಗದಲ್ಲಿ ಅಥವಾ ಅದರ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದೆಂದು ಉದ್ದೇಶಿಸಿ ಘೋಷಿಸಲಾಗಿತ್ತು. ಮತ್ತು ಸದರಿ ಅಧಿಸೂಚನೆಯು ಹೊರಡಿಸಿದ ತೊಂಬತ್ತು ದಿನಗಳೊಳಗಾಗಿ ಸದರಿ ಉದ್ದೇಶದ ಬಗ್ಗೆ ತನ್ನ ಆಕ್ಷೇಪಣೆಗಳನ್ನು ಅಂಥ ಹಿತಾಸಕ್ತಿಯ ಅಥವಾ ಹಕ್ಕಿನ ಸ್ವರೂಪವನ್ನು ಮತ್ತು ಪ್ರತಿಕೂಲ ಪರಿಣಾಮವು ಸಂಭವಿಸಿರಬಹುದಾದ ರೀತಿಯನ್ನು ಮತ್ತು ಅಂಥ ಹಿತಾಸಕ್ತಿ ಅಥವಾ ಹಕ್ಕಿನ ಬಗ್ಗೆ ನಷ್ಟ ಪರಿಹಾರಕ್ಕಾಗಿ ಕ್ಲೇಮು ಮಾಡಲಾದ ಮೊಬಲಗು ಮತ್ತು ವಿವರಗಳನ್ನು ಈ ಕಛೇರಿಗೆ ಲಿಖಿತ ರೂಪದಲ್ಲಿ ತಿಳಿಸತಕ್ಕದೆಂದು ಸದರಿ ಅಧಿಸೂಚನೆಯಲ್ಲಿ ತಿಳಿಸಲಾಗಿತ್ತು.

ದಿನಾಂಕ: 02.12.2003ರ ಅಧಿಸೂಚನೆಯನ್ನು ಮಾಲೂರು ತಾಲ್ಲೂಕು ತಹಶೀಲ್ದಾರ್‌ರ ಮೂಲಕ ಸ್ಥಳೀಯವಾಗಿ ಸಾರ್ವಜನಿಕ ಸ್ಥಳಗಳಲ್ಲಿ ಪ್ರಚುರಪಡಿಸಿರುತ್ತೆ. ಹಾಗೂ ಎಲ್ಲಾ ಸಾರ್ವಜನಿಕರಿಗೂ ತಲುಪುವಂತೆ ಕರ್ನಾಟಕ ರಾಜ್ಯ ಪತ್ರದ ದಿನಾಂಕ: 15.12.2003ರ ವಿಶೇಷ ಪತ್ರಿಕೆಯಲ್ಲಿ ಪ್ರಕಟಿಸಲಾಗಿರುತ್ತೆ. ಈ ಮೇರೆಗೆ ನಿಗದಿತ ಅಂತಿಮ ದಿನಾಂಕ: (02.03.2004ಕ್ಕೆ) ತೊಂಬತ್ತು ದಿನಗಳಲ್ಲಿ ಆಗಲೀ ಅಥವಾ ತಹಲ್‌ವರೆವಿಗೂ ಆಗಲೀ ಯಾರೊಬ್ಬ ಸಾರ್ವಜನಿಕರಿಂದಾಗಲೀ ಯಾವುದೇ ಆಕ್ಷೇಪಣೆಗಳು ಸ್ವೀಕೃತವಾಗಿರುವುದಿಲ್ಲ.

ಮೇಲ್ಕಂಡ ಅಂಶಗಳನ್ನು ಪರಿಶೀಲಿಸಿದ ತರುವಾಯ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ವಡ್ಡುಕುಂಟೆ ಕೆರೆ ಅಂಗಳದ ಜಮೀನಿನ ಪೂರ್ತಿ ಭಾಗವು ಸದರಿ ಕೆರೆಯ ಉಪಯೋಗದಲ್ಲಿಲ್ಲದಿರುವುದರಿಂದ, ಸದರಿ ಕೆರೆ ಅಂಗಳದ ಮೇಲೆ ಸಾರ್ವಜನಿಕರ ಹಾಗೂ ಎಲ್ಲಾ ವ್ಯಕ್ತಿಗಳ ಹಕ್ಕುಗಳು ಕೊನೆಗೊಳ್ಳತಕ್ಕದ್ದೆಂದು ಈ ಮೂಲಕ ಘೋಷಿಸಿದೆ. ಅಂತೆಯೇ ನಿರ್ದಿಷ್ಟಪಡಿಸಿದ ಸದರಿ ವಡ್ಡುಕುಂಟೆ ಕೆರೆ ಅಂಗಳದ ಜಮೀನನ್ನು ಸದರಿ ಶೀರ್ಷಿಕೆಯಿಂದ ತಗ್ಗಿಸಿ ಕಂದಾಯ ಇಲಾಖೆಗೆ ಪಡೆಯಲು ಆದೇಶಿಸಲಾಗಿದೆ ಮತ್ತು ನಿರ್ದಿಷ್ಟಪಡಿಸಿದ ಹಾಗೂ ಕಂದಾಯ ಇಲಾಖೆಗೆ ಪಡೆಯಲಾದ ಸದರಿ ವಿಸ್ತೀರ್ಣದ ಜಮೀನನ್ನು "ಸರ್ಕಾರಿ" ಎಂಬುದಾಗಿ ಕಂದಾಯ ದಾಖಲೆಗಳಲ್ಲಿ ನಮೂದಿಸಲು ತಹಶೀಲ್ದಾರ್ ಮಾಲೂರು ತಾಲ್ಲೂಕು ರವರಿಗೆ ನಿರ್ದೇಶಿಸಲಾಗಿದೆ.

**ಅನುಸೂಚಿ**

| ಜಿಲ್ಲೆ | ತಾಲ್ಲೂಕು | ಹೋಬಳಿ | ಗ್ರಾಮ | ಚೆಕ್ಕುಬಂದಿ |
|---|---|---|---|---|
| ಕೋಲಾರ | ಮಾಲೂರು | ಕಸಬಾ | ಅರಳೇರಿ | ಪೂರ್ವಕ್ಕೆ: ಸ.ನಂ.250, 260, 261, 280 ಹಾಗೂ 281ರ ಜಮೀನುಗಳು.<br>ಪಶ್ಚಿಮಕ್ಕೆ: ಹನುಮಂತಪುರ ಗ್ರಾಮದ ಗಡಿ<br>ಉತ್ತರಕ್ಕೆ: ಸ.ನಂ.250ರ ಜಮೀನು.<br>ದಕ್ಷಿಣಕ್ಕೆ: ಸ.ನಂ.283ರ ಜಮೀನು |

**ಬಿ.ಎಸ್. ರಾಮಪ್ರಸಾದ್**
ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

ಪಿ.ಆರ್. 708

**KARNATAKA POWER TRANSMISSION CORPORATION LIMITED**
**OFFICE OF THE SUPERINTENDING ENGINEER, EL., TRANSMISSION (WORKS), NO.1551, C&D BLOCK, SHIVARAM MARGA, KUVEMPU NAGAR, MYSORE-23**
**DRAFT NOTIFICATION No. SEE/T(W)/MYS/EEE/AEE-2/3339-41, dated: 30th January 2004**

Karnataka Power Transmission Corporation Limited has formulated a scheme under section 28 and clause (e) of section 18 of the Electricity Supply Act 1948 and the scheme is herewith published in pursuance of section 29(2) of the said Act. This notification is issued for information of the license holders and any other concerned persons. Particulars of the scheme are as hereunder:

| | |
|---|---|
| Name of the work: | Construction of 66 KV LILO line tapping the proposed 66 KV Hootgally-Periyapatna line, near Karakanahalli limits, to the proposed 66/11 KV Yelwala SS, Mysore taluk, Mysore district. |
| Salient features: | For improving the voltage conditions and to meet Power demand in and around Yelwala limits, Mysore taluk. |
| Areas passing through: | Karakanahalli limits. |
| Approximate cost: | Rs. 40 lakhs. |

KPTCL shall have and exercise all powers which the telegraph authorities possess under part III of the Indian Telegraph Act 1985 (13 of 1985) for implementation of the above said scheme. Any objections regarding the above scheme shall be sent to the Superintending Engineer, el., Transmission (Works), KPTCL, Mysore-23 within two months from the date of publication of this notification for KPTCL's, pursuance.

P.D.33 Superintending Engineer, El., Transmission (Works), Mysore.

**IN THE COURT OF DEPUTY REGISTRAR OF COOPERATIVE SOCIETIES,**
**TUMKUR DISTRICT, TUMKUR**
**SURCHARGE CASE NO.DRT/6/2002-03**

**PETITIONER** **V/S** **RESPONDENT**

Secretary,
Primary Cooperative Agriculture and
Rural Development Bank Ltd., Tiptur.

1) Smt Padmavathi W/o Late P. Chowdaiah, Raghavendra Nilaya, D.No.3877 near old RTO Office, Behind Ayyappa Temple, Davanagere.
2) Sri P. Kumara swami S/o Late P. Chowdaiah, Raghavendra Nilaya, D.No.3877 Near old RTO Office, Behind Ayyappa Temple, Davanagere.

Notice of confirmation of attachment of inmoveable properties under section 103(2) of the Karnataka Cooperative societies Act 1959.

1) Whereas the petitioner Bank has filed the above surcharge case before me under section 69 of Karnataka Cooperative Societies act 1959 for recovery of a sum of Rs.46,000 along with the interest at the rate of 18 percent on the principle amount from the date of missappropriation till the date of realization from the respondent. The case is taken on file under surcharge case No. DRT/6/2002-03.

2) Whereas it is brought to my notice by the petitioner Bank by an application file under section 103 of Karnataka co-operative Societies act 1959 that the respondents are contemplating to convey or allenate or dispose the inmoveable properties belonging to the Respondents mentioned in the Schedule hereunder, with the intend to delay the enforcement or execution of any award or order that may be passed in the above surcharge case against them.

3) Whereas the petitioner bank has further stated that if the respondents are not prevented from doing so, the petitioner bank will be left no means to recover the amount even if any award/decree is obtained against the respondents.

4) Whereas, I am fully convinced that the disposal of schedule property of the respondent would are defeat or delay the enforcement of execution of any order/decree that may be passed against the respondents.

5) Hence I ordered to issue the notice on 17.3.2004 to the persons concerned and to the persons interested in purchasing or acquiring the properties.

Further it is informed to the respondents that if they desired to have conditional attachment raised, they should furnish cash security to the extent of Rs.46,000 by depositing the said amount in the petitioner bank under suspence account and produce the original receipt/challen issued there on to this office on or before 18.4.2004 with out fail if they fail to furnish the cash security as ordered above with in the stipulated period, the conditional attachment will be confirmed as made absolute.

After the completion of the said period it is seen from the record that the noticer are duly served on the parties, through Registered post acknowledgement due. But neither the respondent nor the interested persons have complied the orders of the court. Therefore it is felt that the respondents are not interested in raising the attachment order. Hence I pass the following order.

**ORDER**

The notice of conditional attachment dated: 17.3.2004 is here by confirmed as made absolute the schedule of property shown there in is attached.

Given under my hand and seen this 26th day of April 2004.

**SCHEDULE**

1) Tumkur District, Chikkanayahally Town 1st Division, Mahalakshmi Extension Municiple Khata No.1770/1759 property No.1013 site including RCC house measuring 40X55 bounded by East: Arun Kumar, West: Road, North: Road, South: Sathyappa.

P.R. 709 Deputy Registrar of Co-op. Societies, Tumkur.

**IN THE COURT OF DEPUTY REGISTRAR OF COOPERATIVE SOCIETIES, TUMKUR DISTRICT, TUMKUR**

**SURCHARGE CASE NO.DRT/8/2002-03**

| PETITIONER | V/S | RESPONDENT |
|---|---|---|
| Secretary,<br>Primary Cooperative Agriculture and Rural Development Bank Ltd., Tiptur. | 1) | Sri Kempegowda S/o Late Rangegowda,<br>Superintendent, Karnataka State Cooperative Agriculture and Rural Development Bank Ltd., Tippu Sulthan Palace Road, Chamaraj Pet, Bangalore-18. |

Notice of confirmation of attachment of immoveable properties under section 103(2) of the Karnataka Cooperative socities Act 1959.

1) Whereas the petitioner Bank has tiled the above surcharge case before me under section 69 of Karnataka Cooperative Societies act 1959 for recovery of a sum of Rs.12,400 along with the interest at the rate of 18 percent on the principle amount from the date of missappropriation till the date of realization from the respondent. The case is taken on file under surcharge case No. DRT/8/2002-03.

2) Whereas it is brought to my notice by the petitioner Bank by an application file under section 103 of Karnataka cooperative Socieites act 1959 that the respondent are contemplating to convey or alienate or dispose the immoveable properties belonging to the Respondent mentioned in the Schedule here under, with the intend to delay the enforcement or execution of any award or order that may be passed in the above surcharge case against them.

3) Whereas the petitioner bank has further stated that if the respondents are not prevented from doing so, the petitioner bank will be left no means to recover the amount even if any award/decree is obtained against the respondent.

4) Whereas, I am fully convinced that the disposal of schedule property of the respondent would are defeat or delay the enforcement of execution of any order/decree that may be passed against the respondents.

5) Hence I ordered to issue the notice on 17.3.2004 to the persons concerned and to the persons interested in purchasing or acquiring the properties.

Further it is informed to the respondents that if they desired to have conditional attachment raised, they should furnish cash security to the extent of Rs.12,400 by depositing the said amount in the petitioner bank under suspence account and produce the original receipt/challen issued there on to this office on or before 18.4.2004 with out fail, if they fail to furnish the cash security as ordered above with in the stipulated period, the conditional attachment will be confirmed as made absolute.

After the completion of the said period it is seen from the record that the notice are duly served on the parties, through Registered post acknowledgement due. But neither the respondent nor the interested persons have complied the orders of the court. Therefore it is felt that the respondents are not interested in raising the attachment order. Hence I pass the following order.

**ORDER**

The notice of conditional attachment dated: 17.3.2004 is here by confirmed as made absolute the schedule of property shown there in is attached.

Given under my hand and seen this 26th day of April 2004.

**SCHEDULE**

1) Tumkur District, Tiptur town C division, Kanchagatta Extention Municiple Khata No.4722/4660 property No.465, site measuring 30X40 Bounded by East: Site No.3, West: Site No.1, North: Survey No.3, South: 20 feet road.

P.R. 710 Deputy Registrar of Co-op. Societies, Tumkur.

**IN THE COURT OF DEPUTY REGISTRAR OF COOPERATIVE SOCIETIES,**
**TUMKUR DISTRICT, TUMKUR**
**SURCHARGE CASE NO.DRT/7/2002-03**

| **PETITIONER** | **V/S** | **RESPONDENT** |
|---|---|---|
| Secretary, Primary Cooperative Agriculture and Rural Development Bank ltd., Tiptur. | 1) | Mallikarjuna Murthy S/o Huchhappa, Supervisor, Primary Cooperative Agriculture and Rural Development Bank Ltd., Sira. |

Notice of confirmation of attachment of immoveable properties under section 103(2) of the Karnataka Cooperative socities Act 1959.

1) Whereas the petitioner Bank has filed the above surcharge case before me under section 69 of Karnataka Cooperative Societies act 1959 for recovery of a sum of Rs.81,600 along with the interest at the rate of 18 percent on the principle amount from the date of missappropriation till the date of realization from the respondent. The case is taken on file under surcharge case No. DRT/7/2002-03.

2) Whereas it is brought to my notice by the petitioner Bank by an application filed under section 103 of Karnataka cooperative Socieites act 1959 that the respondents are contemplating to convey or alienate or dispose the immoveable properties belonging to the Respondents mentioned in the Schedule hereunder, with the intend to delay the enforcement or execution of any award or order that may be passed in the above surcharge case against them.

3) Whereas the petitioner bank has further stated that if the respondents are not prevented from doing so, the petitioner bank will be left no means to recover the amount even if any award/decree is obtained against the respondents.

4) Whereas, I am fully convinced that the disposal of schedule property of the respondent would are defeat or delay the enforcement of execution of any order/decree that may be passed against the respondents.

5) Hence I ordered to issue the notice on 17.3.2004 to the persons concerned and to the persons interested in purchasing or acquiring the properties.

Further it is informed to the respondents that if they desired to have conditional attachment raised, they should furnish cash security to the extent of Rs.81,600 by depositing the said amount in the petitioner bank under suspence account and produce the original receipt/challen issued there on to this office on or before 18.4.2004 with out fail, if they fail to furnish the cash security as ordered above with in the stipulated period, the conditional attachment will be confirmed as made absolute.

After the completion of the said period it is seen from the record that the notice are duly served on the parties, through Registered post acknowledgement due. But neither the respondent nor the interested persons have complied the orders of the court. Therefore it is felt that the respondents are not interested in raising the attachment order. Hence I pass the following order.

**ORDER**

The notice of conditional attachment dated: 17.3.2004 is here by confirmed as made absolute the schedule of property shown there in is attached.

Given under my hand and seen this 26th day of April 2004.

**SCHEDULE**

1) Tumkur District, Chikkanayahally Taluk, Handanker Hobli, Matigatta Village, Survey No.59/54 Ekars Garden, Assessment 5-00 of Mallikarjuna Murthy, Bounded by East: Siddaramaiah, West: Shivalingaiah, North: Kalhachar, South: Gurumurthy.

2) Tumkur District, Tiptur Town C Division Municiple Khata No.4726/524 Site Measuring 40X30 assessment 12-00 of Mallikarjuna Murthy Bounded by East: Site No.2, West: Coloney Premises, North: Site No.3, South: 20 feet road.

P.R. 711 Deputy Registrar of Co-op. Societies, Tumkur.

**BEFORE THE DISTRICT AND SESSIONS JUDGE, UTTARA KANNADA, KARWAR**

**NOTICE**

Notice published under Rule 6(2) of the Notaries Rules, 1956, in the matter of the appointment of a Notary at Dandeli for Dandeli Division (Haliyal Taluka, Uttara Kannada District).

The following Advocates have applied for the appointment as Notary Public for Dandeli Division. Any body interested, may file objections, to the under-signed if any, for the appointment.

1. Sri Prakash B. Angadi, Advocate, Dandeli.
2. Sri S.M. Dabgar, Advocate, Dandeli.
3. Sri M.C. Hegde, Advocate, Dandeli.
4. Sri N.M. Shiraguppi, Advocate, Dandeli.
5. Sri V.R. Hegde, Advocate, Dandeli.
6. Sri Somakumar S. Advocate, Dandeli.
7. Smt. Jyoti P. Nayak, Advocate, Dandeli.

Dated this the 24th day of April, 2004.

**PRAKASH BALLARI**

P.R. 712 District and Sessions Judge, Uttara Kannada, Karwar.

**KARNATAKA ELECTRICITY REGULATORY COMMISSION, BANGALORE-560 001**

**NOTIFICATION No. D/01/03 dated 28.04.2004**

**KARNATAKA ELECTRICITY REGULATORY COMMISSION (CONDITIONS OF LICENCE FOR ESCOMs) REGULATIONS, 2004**

**Preamble**

KERC has granted Licence for Distribution and Retail Supply of Electricity to four Distribution Licensees in Karnataka viz., Bangalore Electricity Supply Company (BESCOM), Mangalore Electricity Supply Company (MESCOM), Hubli Electricity Supply Company (HESCOM) and Gulbarga Electricity Supply Company (GESCOM) (ESCOMs for short) for carrying out the business of distribution of electricity for a period of five years within the area specified in the respective Licences vide Order dated 28-01-2003. These licenses were granted under the Karnataka Electricity Reforms Act, 1999. Government of India has notified June 10, 2003 as the date on which the Electricity Act, 2003 has come into force. According to the first proviso to Section 14 of the Electricity Act 2003, any person engaged in the business of transmission or supply of electricity on or before the appointed date, under the provisions *interalia*, of the Karnataka Electricity Reform Act 1999, shall be deemed to be a Licensee under the Electricity Act, 2003. The fifth proviso to Section 14 also provides that the Companies created in pursuance of the Acts specified in the Schedule (which include the Karnataka Electricity Reforms Act, 1999, (KERA) also) shall be deemed to be Licensees under the Electricity Act, 2003. Section 16 of the Electricity Act, 2003, empowers the Appropriate Commission to specify any general or specific conditions applicable to the Licensees covered by the first to fifth proviso to Section 14, within one year from the appointed date. In exercise of the powers conferred on it by Section 16 of the Electricity Act, 2003, read under appropriate provisions under Karnataka Electricity Regulatory Commission Act, 1999, the Karnataka Electricity Regulatory Commission hereby makes the following Regulations.

**1. Short title, Commencement and Extent:**

(a) These Regulations may be called Karnataka Electricity Regulatory Commission (Conditions of Licence for ESCOMs) Regulations, 2004.

(b) They shall come into force with effect from 10.06.2004

(c) They shall apply to BESCOM, MESCOM, HESCOM and GESCOM.

**2. Definitions**

The words, terms and expressions used in these regulations shall have the same meaning assigned by the Electricity Act, 2003 read with KERA, 1999 and in case of conflict, the meaning assigned in the Electricity Act, 2003 shall prevail.

**3. Conditions of Licence**

(a) The general and special conditions of license applicable to the ESCOMs with effect from the notified date shall be as set out in Form -I appended to these Regulations

(b) The conditions of licence in Form 1 shall be deemed to have been incorporated in the Karnataka Electricity Regulatory Commission (Licensing) Regulations, 2000 as amended time to time

